ಪ್ರತಿಭಾ ಗ್ರಂಥಮಾಲೆ, ಧಾರವಾ... ...ದ ೧ನೇ ಕಿರಣ.

# ಜೀವದಾನ

( ಸಾಮಾಜಿಕ ಕಾದಂಬರಿ )



**ನಾರಾಯಣ ಹುಲಗಿ,** ಎಂ. ಎ.
ಮುಂಡರಗಿ



೧೯೫೫  ೧—೦—೦

# ಪ್ರಕಾಶಕರ ನಿವೇದನೆ

ಪ್ರತಿಭಾ ಗ್ರಂಥಮಾಲೆಯು ತನ್ನ ಹದಿಮೂರನೆಯ ವರ್ಷದಲ್ಲಿ ಅಡಿ ಇಡುತ್ತಿದೆ. ೧೯೪೪ರಲ್ಲಿ ಆರಂಭವಾದ ಈ ಗ್ರಂಥಮಾಲೆಯು ಯಾವದೇ ಕಾರಣದಿಂದಾಗಿ ಪ್ರಕಟನೆಯನ್ನು ನಿಲ್ಲಿಸಿಲ್ಲ. ಚಂದಾದಾರರಿಂದ ಪಡೆದ ಹಣಕ್ಕೆ ಪ್ರತಿಯಾಗಿ ಅವರಿಗೆ ಸಕಾಲಕ್ಕೆ ಪುಸ್ತಕ ಸಲ್ಲಿಸುವ, ಪ್ರಕಾಶಕರ ವ್ಯವಹಾರ ನೀತಿಯನ್ನು ಚಾಚೂ ಬಿಡದಂತೆ ಪಾಲಿಸುತ್ತ ಬಂದಿದ್ದೇವೆ. ಅಂತೆಯೇ ಇದು ಕನ್ನಡಿಗರ ಮೆಚ್ಚುಗೆಯ ಗ್ರಂಥಮಾಲೆಯಾಗಿ ಕನ್ನಡ ನಾಡಿನಲ್ಲೆಲ್ಲ ಬೆಳಗುತ್ತಿದೆ.

ಯಾವುದೊಂದು ನೆಪವನ್ನು ಮುಂದೆ ಮಾಡಿ ಚಂದಾದಾರರನ್ನು ಗೋಳು ಹೊಯ್ಯಿಸದೆ, ಮಾಲೆಯು ಯಶಸ್ವಿಯಾಗಿ ನಡೆದುಕೊಂಡು ಬಂದುದು ಒಂದು ಅಭಿಮಾನಾಸ್ಪದ ಸಂಗತಿಯಾಗಿದೆ. ಇದಕ್ಕೆ ಲೇಖಕ ಮಿತ್ರರೂ, ಚಂದಾದಾರರೂ ಮತ್ತು ಪುಸ್ತಕ ವ್ಯಾಪಾರಿಗಳೂ ತೋರುತ್ತಿರುವ ಹಾರ್ದಿಕ ಸಹಾನುಭೂತಿಯೇ ಕಾರಣವಾಗಿದೆಯೆಂಬುದನ್ನು ಒಪ್ಪಿಕೊಳ್ಳಲೇ ಬೇಕು. ಎಲ್ಲರಿಗೂ ನಮ್ಮ ಅನಂತ ವಂದನೆಗಳು.

ನಾವು ಕೊಡುತ್ತಿರುವ ಸಾಹಿತ್ಯದಲ್ಲಿ ಕೆಲವೊಂದು ಕೆಲವರಿಗೆ ರುಚಿಸುತ್ತಿರಬಹುದು, ಕೆಲವರಿಗೆ ರುಚಿಸುತ್ತಿರಲಿಕ್ಕಿಲ್ಲ. ಖ್ಯಾತನಾಮರಾದ ಕೆಲವು ಲೇಖಕರ ಕೃತಿಗಳನ್ನೂ ಒದಗಿಸಿದ್ದೇವೆ. ಹೊಸ ಲೇಖಕರ ಕೆಲವು ಒಳ್ಳೇ ಕೃತಿಗಳನ್ನೂ ಕೊಟ್ಟಿದ್ದೇವೆ. ಒಟ್ಟಾರೆ ಎಲ್ಲ ಅಭಿರುಚಿಯನ್ನೂ ತೃಪ್ತಿಪಡಿಸಲು ಸಾಧ್ಯವಿದ್ದಷ್ಟೂ ಯತ್ನಿಸುತ್ತಿದ್ದೇವೆ. ಈ ನಮ್ಮ ಪ್ರಯತ್ನದಲ್ಲಿಯ ಕುಂದು ಕೊರತೆಗಳ ಬಗ್ಗೆ ಮನ್ನಿಸಿ ಎಂದಿನಂತೆ ಓದುಗರು ಪ್ರೋತ್ಸಾಹನೆಯನ್ನು ನೀಡಬೇಕೆಂದು ಬೇಡಿಕೊಳ್ಳುತ್ತೇವೆ.

---

ಮುದ್ರಕರು ಮತ್ತು ಪ್ರಕಾಶಕರು:
ಬಾಲಚಂದ್ರ ಘಾಣೇಕರ
**ಪ್ರತಿಭಾ ಮುದ್ರಣ, ಧಾರವಾಡ.**

# ಜೀವದಾನ

## ೧

ಎಲ್ಲರೂ ವರ್ತಮಾನ ಪತ್ರದ ದಾರಿ ಕಾಯುತ್ತ ನಿಂತಿದ್ದರು. ಹಳ್ಳಿಯ ಜನವೆಲ್ಲ ಆತುರತೆಯಿಂದ ಬಸ್ ನಿರೀಕ್ಷಣೆಯಲ್ಲಿದ್ದಿತು. ಭವಿಷ್ಯತ್ತಿನ ರೂಪ-ರೇಷೆಗಳನ್ನು ನಿರ್ಮಿಸುವ ರಿಜಲ್ಟು ( Result ) ಅಂದಿನ ಪೇಪರಿನಲ್ಲಿ ಬರುವದಿತ್ತು.

ಬಡತನದಲ್ಲಿ ಬಳಲಿದ ಅನಂತನ ತಂದೆ ನಿಮಿಷ ನಿಮಿಷಗಳನ್ನು ದೀರ್ಘವಾಗಿ ಕಳೆಯಹತ್ತಿದನು. ತನ್ನ ಮಗ ತೇರ್ಗಡೆಯಾಗಲೆಂದು ದೇವರನ್ನು ಮನದಲ್ಲೇ ಬೇಡಿಕೊಳ್ಳುವದಂತೂ ವಿಶೇಷವಾಗಿತ್ತು.

ಹನ್ನೊಂದಕ್ಕೆ ಸರಿಯಾಗಿ ಬರಬೇಕಾದ ವರ್ತಮಾನಪತ್ರ ಮೇಲೆ ಇನ್ನೊಂದು ಘಂಟೆ ದಾಟಿದರೂ ಬರಲಿಲ್ಲ. ಕೆಲವರು ಹೊತ್ತಾದ್ದರಿಂದ ಮನೆಗೆ ಹಿಂದಿರುಗಿದರು. ಆದರೆ ಹುಡುಗರು ಮಾತ್ರ ಕೇಕೆ ಹಾಕುತ್ತ ಅತ್ತಿತ್ತ ಸುಳಿದಾಡುತ್ತಿದ್ದರು.

“ ಪೇಪರು ಯಾವಾಗಽ ಬರ್ಲಿ, ಲಗೂ ಸಿಗೋ ಚಹಾ ತಪ್ಪಿತಲ್ಲ ” ಎಂದು ಉಳಿದವರಲ್ಲಿ ಹಲವರು ಅಂದರು.

ಅನಂತನು ಉದಾಸೀನತೆಯ ಉಸಿರು ಎಳೆಯುತ್ತ ಮನೆಯ ದಾರಿ ಹಿಡಿದನು. ಆದರೆ ಮನಸ್ಸಿನಲ್ಲಿ ಜಯಾಪಜಯಗಳ ದ್ವಂದ್ವ ನಡೆದೇ ಇತ್ತು. ‘ ರಿಜಲ್ಟು ’ ಯಾವಾಗ ಬಂದರೇನು ? ಅಭ್ಯಾಸ ಮಾಡಿದ್ದೇನೆ, ಯಶಸ್ಸು ಸಿಗಲೇಬೇಕು ಎಂಬ ನಿರ್ಧಾರದಿಂದ ಮನೆಯಲ್ಲಿಯೇ ಕೂತನು. ಮರುಕ್ಷಣದಲ್ಲಿಯೇ ‘ ಪರಿಣಾಮ ’ ದೈವಾಧೀನ ಎಂಬ ವಿಚಾರ ಹೃದಯಾಕಾಶದಲ್ಲಿ ಮಿಂಚಿ ಮಾಯವಾದಾಗ ಪುನಃ ಬಸ್‌ಸ್ಟ್ಯಾಂಡಿಗೆ ಪೇಪರಿನ ದಾರಿ ಕಾಯಲು ತಿರುಗಬೇಕಾಯಿತು.

ದೂರದಲ್ಲಿ ಬರುವ ಮೋಟರ ಸಪ್ಪಳ ಕೇಳಹತ್ತಿತು. ಆತುರ ಅಭಿಲಾಷೆಗಳ ಒತ್ತಡ ಹೆಚ್ಚಿದ್ದರಿಂದ ಎಲ್ಲರೂ ಮೋಟರಿನತ್ತ ಧಾವಿಸಿದರು. ಹೇಗೂ ಮೋಟರು ಬಂದು ನಿಂತದ್ದಾಯಿತು.

ಕಾತರತೆಯಿಂದ ಪೇಪರು ತೆಗೆದು ನೋಡಿದಾಗ ಅನಂತನ ಹೆಸರು ಬಂದಿತ್ತು. ಅನಂತನ ಉಲ್ಹಾಸ ಉಕ್ಕೇರಿತು. ಕೃತಜ್ಞತೆಯಿಂದ ಜೀವ ದೇವರನ್ನು ಮನದಲ್ಲಿಯೇ ವಂದಿಸಿತು.

ಕೋಲಳ್ಳಿಯಲ್ಲಿ ಅಂದು ಸಂಭ್ರಮವೇ ಸಂಭ್ರಮ. ಎಲ್ಲರ ಬಾಯಲ್ಲಿಯೂ ಅನಂತನದೇ ಮಾತು. ಮುಸುರೆ ತಿಕ್ಕುವ ಲಚ್ಚಮ್ಮನಿಗೂ ಆನಂದವೆ! ಮನೆಯವರೆಗೆ ಬಂದು ಅನಂತನನ್ನು ನೋಡಿ ಹಿರಿ ಹಿರಿ ಹಿಗ್ಗಿದಳು. "ಯವ್ವಾ, ಅಂತಪ್ಪ ದೊಡ್ಡ ಮನಸ್ಯಾ ಆಗಾಕs ಬೇಕs ನೋಡ" ಎಂದಳು.

"ಲಚ್ಮವ್ವಾ, ನಿನ್ನ ಮಗ ಮಲ್ಲನೂ ನಮ್ಮ ಅಂತಪ್ಪನ್ಹಾಂಗ ಪರೀಕ್ಷಾ ಪಾಸಾಗಿ ನವಕರಿ ಮಾಡತಾನವ" ಎಂದು ಕಮಲಾಬಾಯಿಯವರು ನುಡಿದರು.

" ಎಲ್ಲಾ ಆ ಪರಮಾತ್ಮನ ಮ್ಯಾಲೆ ಆಯಿತೆವ್ವಾ " ಎಂದು ಹೇಳಿ ತನ್ನ ಮನೆಗೆ ಹಿಂದಿರುಗಿದಳು.

ಪರೀಕ್ಷೆ ಪಾಸಾಗಿದ್ದರಿಂದ ಗೆಳೆಯರ ಒತ್ತಾಯಕ್ಕೆ ಅನಂತ ಊರು ಮುಂದಿನ ಗುಡ್ಡದ ಮೇಲೆ ಪಾರ್ಟೀ ಕೊಟ್ಟನು. ಊರಲ್ಲಿ ಯಾವದಾದರೂ ಪಾರ್ಟೀ ಪ್ರೋಗ್ರ್ಯಾಮ ಇದ್ದರೆ ಅದು ಜರಗುವದು ಈ ಗುಡ್ಡದ ಮೇಲೆಯೆ, ಅಂದ ಮೇಲೆ ?

ಅನಂತನ ಸ್ನೇಹಿತ ವರ್ಗವೆಲ್ಲವೂ ಅಲ್ಲಿ ಕಲೆಯಿತು. ಪಾರ್ಟಿ ಮೆಂಬರರಾಗಿ ಓರಗೆಯವರೆಲ್ಲರೂ ಕೂಡಿದ್ದರು. ಮಾರುತಿ—ಮೂರುತಿಗೆ ಎರಡು ಕಾಯಿ ಒಡೆಸಿದನು. ಆದರೆ ಅರ್ಧ ಭಾಗ ಪೂಜಾರಿಯ ವಶಕ್ಕೆ ಹೋಗಿದ್ದರಿಂದ ಒಂದೇ ಕಾಯಿ ಒಡೆಸಿದ ಹಾಗಾಯಿತಲ್ಲ ಎಂದು ಹಳಹಳಿಸಿದಲ್ಲಿ ತಪ್ಪೇನು ? ಆದರೂ ಎದುರಿನಲ್ಲಿ ಪರ್ವತಪ್ರಾಯವಾಗಿದ್ದ ಮಂಡಾಳಿನ ರಾಸಿ ಮಾತ್ರ ಕ್ಷಣಾರ್ಧದಲ್ಲಿಯೇ ಮಾಯವಾಯಿತು.

" ಏನಪಾ ಅನಂತಾ, ಮತ್ತ ಬಿಳಿಬತ್ತಿ ಅವನೋ ಇಲ್ಲೋ ? " ಎಂದು ಭೀಮು ಕೇಳಿದನು.

" ನಿನಗ್ಯಾಕೊ ಬಿಳಿಬತ್ತಿ, ಖಾಕಿ ಅವಲ್ಲಾ? ರೊಕ್ಕಿಲ್ಲದ ಕೊಟ್ರ ಎಲ್ಲಾ ಬೇಕಿವಗ " ಎಂದು ಶೀನು ಅಣಕವಾಡಿದನು.

" ಅಲ್ಲೊ ಶೀನ್ಯಾ, ನಿಮ್ಮಪ್ಪ ಕಾಯಿ ಒಡೆದು ಅರ್ಧಾ ಹಿಸೆ ತಗೊಂಡ್ಹಲ್ಲಾ, ಅದಕ್ಕೇನ ರೊಕ್ಕ ಕೊಟ್ಟಿದ್ನೇನು ? " ಎಂದು ಮರುಬಾಣವನ್ನು ಭೀಮು ಬಿಟ್ಟನು.

ತಂದಿದ್ದ ಮೂರು ಪ್ಯಾಕು ಆನೆ ಸಿಗರೇಟುಗಳನ್ನು ಅನಂತ ಚೆಲ್ಲಿದನು. ಎಲ್ಲರೂ ಉನ್ಮಾದದಿಂದ " ವಾಹವ್ವಾ ಈಗ ನೋಡು ರಂಗಪ್ಪಾ " ಎಂದು ಒದರಹತ್ತಿದರು. ಮಿತ್ರರ ಆಗ್ರಹಕ್ಕೆ ಒಳಗಾಗಿ ಅನಂತ ಒಂದು ಸಿಗರೇಟು ಸೇದಬೇಕಾಯಿತು. ಹೊಗೆಯ ಮಧ್ಯದಲ್ಲಿ ಹಳೆ ಹೊಸ ಸಂಗತಿಗಳೆಲ್ಲ ತೆರೆ ತೆರೆಯಾಗಿ ಏಳಹತ್ತಿದವು.

"ಅಲ್ಲೊ ಅಂತ್ಯಾ, ನಾ ನಾಲ್ಕನೆತ್ತಾ ಇದ್ದಾಗ ರಹೀಮುಂತಃ ಇದ್ನಲ್ಲಾ ಅವಾ ಈಗ ಎಲ್ಲಿದ್ದಾನೊ? ಏ ಮರತ ಬಿಟ್ಟೆವಲ್ಲ. ಆ ಜೋಡ್ಡೆಳ್ಳಿಂದು ವಿಮಲಾ ಅಂತ ಇತ್ತಲ್ಲೊ, ಏನ ಮಾಡತದ ಈಗ ಅದು?" ಎಂಬ ಪ್ರಶ್ನ ಮಾಲಿಕೆಯನ್ನೇ ಶಂಕರ ತೆಗೆದನು. ಕೂಡಲೇ ಶೀನು "ಹೌದ, ಹೌದು ಏನಪಾ ಆಕಿ ಸುದ್ದಿ?" ಎಂದು ಕೇಳಿದ.

" ಏನೋಪಾ, ಆ ರಹೀಮೋನಃ ಇದ್ದ ನೋಡು ಅವ ತಮ್ಮ ಮಾವನ ಮನಿ ಹೈದ್ರಾಬಾದ ಕಡೆ ಹೋಗ್ಯಾನಂತ. ಆದರೆ ಆ ವಿಮಲಾ ಅಂದೆಲ್ಲಾ, ಆಕಿ ಮಾತ್ರ ಈಗ ಕಾಲೇಜದಾಗ ಸ್ಕಾಲರ ಆಗ್ಯಾಳಂತ. She was very intelligent " ಎಂಬ ಉತ್ತರ ಅನಂತನಿಂದ ಹೊರಬಂದಿತು.

ಗುಂಡ್ಯಾ ರಂಗ್ಯಾ ಗಾಬರಿಯಾಗಿ " ಏನಪಾ ಟಿಸ್ ಪಿಸ್ ಅಂದೆಲ್ಲ " ಎಂಬ ಉತ್ತರ ಅನಂತನಿಂದ ಹೊರಬಂದಿತು.

" ಟೀ ಅಂದ್ರ ಚಹಾ ಎಸ್ ಅಂದ್ರ ಸಿಗರೇಟು " ಎಂದು ಮಲ್ಲೇಶಿ ವಾಕ್ಯಾರ್ಥ ಮಾಡಿದನು. ಎಲ್ಲರ ಮುಖಗಳಲ್ಲಿ ನಗೆ ನಲಿದಾಡಿತು. ಹೊತ್ತಾಗಿದ್ದರಿಂದ ಗೆಳೆಯರೆಲ್ಲರೂ ಮನೆಯ ದಾರಿ ಹಿಡಿದರು.

ಅನಂತನ ಮನೆಯಲ್ಲಿ ಆನಂದ ಹಾಸುಹೊಕ್ಕಾಗಿ ಹರಿಯಿತು. ತಾಯಿ ಕಮಲಾಬಾಯರ ಸಂತೋಷ ಎಲ್ಲೆ ಮೀರಿ ಹೋಯಿತು. ಸತ್ಯನಾರಾಯಣ

ಪೂಜೆಯೂ ಸಾಂಗವಾಗಿದ್ದರಲ್ಲಿ ಏನಾಶ್ಚರ್ಯ! ಊರ ಹಿರಿ-ಕಿರಿಯರೆಲ್ಲರಿಗೂ ಅನಂತನ ಆಮಂತ್ರಣ ಹೋಗಿತ್ತು.

ಈಗ ಅನಂತನ ಭವಿಷ್ಯತ್ತಿನ ಬಗ್ಗೆ ಗಂಡ-ಹೆಂಡರಿಬ್ಬರಲ್ಲಿಯೂ ಒಂದು ವಾಗ್ಯುದ್ಧವೇ ನಡೆದಿದೆಯೆಂದರೂ ತಪ್ಪಲ್ಲ.

" ಅಲ್ಲಾ ಮತ್ತs ಅನಂತನ ವಿಚಾರವೇನು? " ಎಂದರು ವೆಂಕಟರಾಯರ ಹೆಂಡತಿ.

" ವಿಚಾರೇನು ಯಲ್ಲ್ಯಾದರೂ ನವಕರಿ ಸೇರಸೋದು. "

" ಅದ್ಯಾಕs ಅಂವಾ ಕಲಿಬೇಕಂತ ಅಂತಾನ ಮತ್ತs. "

" ಹೌದು ನನಗೂ ಕಲಿಸಬೇಕು ಅಂತ ಬಹಳ ಮನಸದ. ಆದ್ರ ಏನ ಮಾಡ್ಲಿ ನಂದೂ ಕೈ ಸಿಂತದ. "

"ನನಗೂ ಗೊತ್ತsದ; ಆದ್ರ ಅನಂತ ಕಲೀತೀನಿ ಅಂತ ಹಟಾನ ಹಿಡದಾನ. ಮನ್ಯಾಗಿದ್ದ ಆ ಬಂಗಾರದ ಸರಾ ಮಾರ್ಯಾದ್ರು ಕಳಿಸರಿ, ದೇವರ ಇದ್ದಾನ. "

" ನನ್ನ ಮಗಾ ಕಲ್ಯೋದು ನನಗ ಬ್ಯಾಡಾಗೇದ? ಆದ್ರ ಕಾಲೇಜ ಅಂದ್ರ ಸಣ್ಣ ಕೆಲಸ ಅಲ್ಲ. "

ಅಷ್ಟರಲ್ಲಿ ಹೊರಗಿನಿಂದ ಅನಂತನೂ ವಿಶ್ವನಾಥಭಟ್ಟರೂ ಬಂದರು. ಕಮಲಾಬಾಯಿರು ನಮಸ್ಕರಿಸಿ " ಭಟ್ಟರೆ, ಅನಂತನ ಮುಂದಿನ ವಿಚಾರ ಏನ ಮಾಡಬೇಕಂತ ಅಂತೀರಿ? "

" ವಿಚಾರೇನು? ಕಾಲೇಜಕ್ಕ ಹೋಗತಿನಿ ಅಂತಾನ, ಹೋಗಲೆಲ್ಲ. ಯಾರಿಗೆ ಅಡಚಣಿ ಇಲ್ಲ? ಹ್ಯಾಂಗರs ಮಾಡಿ ಕಳಿಸಬೇಕು. ಯಾಕ ರಾಯರ?"

ರಾಯರು ಮೌನದಿಂದಲೇ ಮಾರುತ್ತರ ಕೊಟ್ಟರು. ತಾಯಿಯ ಒಲವನ್ನು ಅರಿತು, ಅನಂತ ಮನದಲ್ಲಿಯೇ ಭವಿಷ್ಯತ್ತಿನ ರೂಪರೇಷೆಗಳನ್ನು ಕೊರೆದನು. ಕಲ್ಪನಾ ರಾಜ್ಯದಲ್ಲಿ ಕೆಲಕಾಲ ಸಾರ್ವಭೌಮನಾಗಿ ಮೆರೆದನು. ಆದರೆ ಗುರುತರವಾದ ಗುರಿಯೆಡೆಗೆ ತಾನು ಧಾವಿಸುತ್ತಿರುವೆನೆಂದು ತಿಳಿದಾಗ ಭಯವಿಹ್ವಲನಾದ. ಆದರೂ ಕಾಲೇಜಕ್ಕೆ ಹೋಗುವದೇ ಕೊನೆಯ ನಿರ್ಧಾರವೆಂದು ಮಾಡಿದ.

ನಿಷೇಧ ಸೂಚಿಸುವ ರಾಯರ ಮುಖ ನೋಡಿ ಭಟ್ಟರು 'ಯಾಕ ರಾಯರ' ಎಂದು ಪುನಃ ಅಂದರು.

"ಏನೂ ಇಲ್ಲ, ಮತ್ತs ಊರಾಗಿನ ಪ್ರಮುಖರು ಬ್ಯಾಡ ಅಂದಿದ್ರು, ಆದಕ್ಕ ವಿಚಾರ ಮಾಡಿದೆ" ಎಂದರು ರಾಯರು.

"ಜನ ಏನು ? ಆ ಜನಾ ಏನs ಅದ ನೋಡ್ರಿ ಅಹಂಭಾವದವರು. ಮಂದಿ ಮುಂದ ಹೋಗೋದು ಅವರಿಗೆ ಸಹನ ಇಲ್ಲ. ದೇವರ ಇದ್ದಾನ ಕಳಿಸಿ ಬಿಡ್ರಿ. ಮುಂದೆ ನೋಡಿದ್ರಾತು."

ಅನಂತ ಕಮಲಾಬಾಯರಿಬ್ಬರೂ ಕೃತಜ್ಞತೆಯಿಂದ ಮನದಲ್ಲಿಯೇ ಭಟ್ಟರನ್ನು ಹೊಗಳಿದರು. ಹೊತ್ತಾಗಿದ್ದರಿಂದ ಭಟ್ಟರು ಆಸ್ಹಿಕಕ್ಕಾಗಿ ಮನೆಗೆ ಹೋದರು.

ಕೋಲಳ್ಳಿಯಲ್ಲಿಯ ಸರ್ವ ಜಾತಿ-ಪಂಥಕ್ಕೂ ಭಟ್ಟರು ಪುರೋಹಿತರು. ಭಟ್ಟರೆಂದರೆ ಜನತೆಗೆಲ್ಲ ತುಂಬ ಆದರ. ಅವರಿಲ್ಲದೆ ನಡೆಯುವ ಯಾವ ಕಾರ್ಯಗಳೂ ಇಲ್ಲ. ಒಟ್ಟಿನ ಮೇಲೆ ಅವರು ಊರಿನ ಕಣ್ಣು. ದೀನ ದರಿದ್ರರ ದಾರಿಗೋಲು.

ದಿನ ಬರಲು ತಡವೆ? ಜೂನ ಹತ್ತು ಆಗಲೆ ಸಂದಿತ್ತು. ಮರುದಿನ ವೆಂಕಟರಾಯರು ಗೆಳೆಯರಲ್ಲಿ ಹೋಗಿ ಐವತ್ತು ರೂಪಾಯಿ ಕೈಗಡ ತಂದು ಅನಂತನಿಗೆ ಕೊಟ್ಟರು. ತಾಯಿ ಕಮಲಾಬಾಯರು ಉಂಡಿ, ಅವಲಕ್ಕಿ ಮಾಡಿ ಗಂಟು ಕಟ್ಟಿ ಕೊಟ್ಟರು. ಕಾಲೇಜ ಆರಂಭವಾಗಲು ಆರೇಳು ದಿನ ಮಾತ್ರ ಉಳಿದಿದ್ದವು. ಹೊರಡುವ ಸಿದ್ಧತೆಗಳೆಲ್ಲ ಮುಗಿದಿದ್ದರೂ ತಾಯಿತಂದೆಗಳು ಬೇಗನೇ ಹೋಗಲು ಕೊಡಲಿಲ್ಲ. ಆದರೆ ಕೇವಲ ಎರಡು ದಿನ ಉಳಿದಿದ್ದರಿಂದ ಅನಂತ ಸೈನಿಕನಂತೆ ಸಿದ್ಧನಾದನು. ಆದರೆ ಮರುದಿನವೇ ರಾಯರ ವಾರ ಗುರುವಾರ ಇದ್ದದ್ದರಿಂದ ಪೂಜೆ ಮಾಡಿ ರಾಯರ ಆಶೀರ್ವಾದವನ್ನೂ ತಂದೆ ತಾಯಿಗಳ ಸಾವಿರ ಹರಕೆಗಳನ್ನೂ ಹೊತ್ತುಕೊಂಡು ಹೊರಟನು. ಪ್ರತಿ ಸಾರೆಯಂತೆ ಕಮಲಾಬಾಯರ ಕಣ್ಣುಗಳು ಹನಿಗೂಡಿದವು.

ಅನಂತ ಹತ್ತಿದ ಮೋಟರು ಓಡಿತು.

೨

ಧಾರವಾಡಕ್ಕೆ ಕಾಲೇಜ ಶಿಕ್ಷಣ ಪಡೆಯಲು ಅನಂತ ಬಂದಿದ್ದ. ವಾತಾವರಣ, ಆಚಾರ-ವಿಚಾರ ಎಲ್ಲವೂ ಹೊಸವು.

ನಾಲ್ಕು ರೂಪಾಯಿ ಗೊತ್ತುಮಾಡಿ ಸಾಧನಕೇರಿಯಲ್ಲಿ ಖೋಲಿಯೊಂದನ್ನು ಹಿಡಿದನು. ಖಾನಾವಳಿಗೆ ಹೋಗಿ ರೂಪಾಯಿ ಕೊಟ್ಟು ಒಪ್ಪೊತ್ತು ಊಟವನ್ನು ಮಾಡಿದ್ದೂ ಆಯಿತು. ತಾಯಿ ವಿರಹದ ನಿಜ ಪಾಪ ಅರಿವು ಆಗ ಅನಿಸಿತು. ಮಾತೃಪ್ರೇಮದಿಂದ ಪೂರಿತವಾದ ಆ ಅನ್ನವೆಲ್ಲಿ ! ಹಣದಾಸೆಗಾಗಿ ಮಾರುವ ಈ ಅನ್ನವೆಲ್ಲಿ !! ತಾಯ ಪ್ರೀತಿಯ ಮಾತುಗಳು ಇಂದಿನ ಊಟದ ಕಾಲದಲ್ಲಿ ಇಲ್ಲ. ನಿಸ್ಸಹಾಯಕನಾಗಿ ತಿಂಗಳ ಕೊನೆಯವರೆಗೂ ರೊಕ್ಕ ತೆತ್ತ ರೋಷಕ್ಕಾಗಿ ಅಲ್ಲಿಯೇ ಊಟದ ಶಾಸ್ತ್ರವನ್ನು ಮುಗಿಸಿದನು. ಹಬ್ಬ ಹರಿದಿನ, ಕರಿದಿನ ಎಲ್ಲ ದಿನಗಳಲ್ಲಿಯೂ ಅದೇ ಅರೆಬೆಂದ ಊಟ.

ಪ್ರಥಮ ತಿಂಗಳು ಕೊನೆಗೊಂಡದ್ದರಿಂದ ಎರಡನೇ ತಿಂಗಳಿಗಾಗಿ ಹೆಸರು ರಜಿಸ್ಟರ ಮಾಡಿಸಲು ಅನಂತ ಖಾನಾವಳಿಗೆ ಹೋದನು. ಆದರೆ ಕಂಟ್ರೋಲದ ಕರಾಳ ಶಾಸನಕ್ಕನುಕೂಲವಾಗಿ ಊಟದ ಚಾರ್ಜು ಮೂವತ್ತರಿಂದ ನಾಲವತ್ತೆರಡಕ್ಕೆ ಏರಿದೆ ಎಂದು ಮಾಲಕರು ಗಂಭೀರವಾಗಿ ಹೇಳಿದರು. ಮೂವತ್ತೇ ಭಾರವಾದಾಗ ಮೇಲೆ ಹನ್ನೆರಡು ಕೊಡುವದು ಹೇಗೆ ? ಅನಂತ ಖಾನಾವಳಿಯಿಂದ ಹಾಗೆಯೇ ಹಿಂದಿರುಗಬೇಕಾಯಿತು. ಆದರೆ ಹಸಿವು ಕೇಳುವದೆ ? ಅದಕ್ಕೆ ಚಿಂತೆ ಚಿಂತೆಗಳು ಇಲ್ಲ. ಭಾರವಾದ ಹೃದಯದಿಂದ ಅನಂತ ಮಾರ್ಕೆಟ್ಟಿಗೆ ನಡೆದನು. ಕಣ್ಣಿಗೆ ಕಂಡ ನಾಲ್ಕು ಜರ್ಮನಶಿಲವಾರದ ಭಾಂಡಿ ಕೊಂಡನು. ಬೇಳೆ ಬೆಲ್ಲಗಳೂ ಖರೀದಿ ಆದವು. ಬ್ಲ್ಯಾಕಿನಲ್ಲಿ ಅಕ್ಕಿಯನ್ನು ಕೊಂಡು ಸಾವಧಾನದಿಂದ ಸಾಧನಕೇರಿಗೆ ನಡೆದನು. ವಿಚಾರಮಂಥನ ಹೃದಯದಲ್ಲಿ ನಡೆದದ್ದರಿಂದ ಖೋಲಿಯಿಂದ ದೂರ ಹಾಗೆಯೇ ಸಾಗಿದ್ದನು. ಎದುರಿನಲ್ಲಿ ಎಮ್ಮೆಗಳ ಹಿಂಡು ಬಂದದ್ದರಿಂದ ಕತ್ತು ಮೇಲೆತ್ತಿದನು. ಆದರೆ ಖೋಲಿ ದೂರವಾಗಿ ಹಿಂದೆ ನಿಂತಿತ್ತು. ನಿರುಪಾಯನಾಗಿ ವಾಸಮಂದಿರಕ್ಕೆ ಸೋತ ಸೈನಿಕನಂತೆ ಬಂದನು.

ನೇಸರನು ನೆತ್ತಿಯ ಮೇಲೆ ಬಂದಿದ್ದ. ಕಾಲೇಜಿನ ವೇಳೆ ಉರುಳಿತ್ತು. ಆದರೂ ಹೊಟ್ಟೆಯುರಿ ಅಧಿಕವಾಗಿಯೇ ಇತ್ತು. ಕಟ್ಟಿಗೆ ಕುಳ್ಳುಗಳನ್ನು ಶೇಖರಿಸಿ ಅಡಿಗೆ ಆರಂಭಿಸಿದ. ಇಂದಿನಿಂದ ಆರಂಭವಾಯಿತು ಅನಂತನ ದ್ವಿತೀಯ ಜೀವನ. ಒಲೆ ಊದಿದ್ದರಿಂದ ಕಣ್ಣುಗಳು ಕೆಂಗಣ್ಣುಗಳಾದವು. ಅವಸರದಿಂದ ಅನ್ನ ಇಳಿಸಹೋದನು. ಆದರೆ ಅದು ಕೈಮೇಲೆ ಚೆಲ್ಲಿತು. ಅನಂತನ ಮೇಲೆ ಅದಕ್ಕೂ ಕೋಪವೇ? ಹೊಟ್ಟೆಯಲ್ಲಿಯ ಹಸಿವಿನ ಉರಿ, ಒಲೆಯಲ್ಲಿಯ ಕೆಂಡದ ಉರಿ, ಕೈಯಲ್ಲಿಯ ಘಾಯದ ಉರಿ, ಇವುಗಳ ದಾಹ ಹೆಚ್ಚಿದ್ದರೂ, ಮನ ನೊಂದು ಬೆಂದಿದ್ದರೂ ವ್ಯಕ್ತಿತ್ವ ಮಾತ್ರ ಅಗ್ನಿಯಲ್ಲಿಯ ಅಪರಂಜಿಯಂತೆ ಚೊಕ್ಕವಾಗಿಯೇ ಇತ್ತು. ಕಾಸಿದಂತೆ ಕಾಂಚನದ ಹೊಗರು ಅಧಿಕವಲ್ಲವೆ? ಅಂತೂ ತಾನೇ ತಯಾರಿಸಿದ ಅಡಿಗೆಯನ್ನೂಟಮಾಡಿದನು. ಅನುತಾಪ ಅಧಿಕವಾಗಿದ್ದರಿಂದ ಹಾಸಿಗೆ ಹಾಸಿ ಮಲಗಿಸಿದನು. ಕ್ಷಣಾರ್ಧದಲ್ಲಿಯೇ ಬೇರೊಂದು ಲೋಕ ಕಂಡನು.

ಎದ್ದು ನೋಡುತ್ತಾನೆ, ಆಗಲೇ ಹೊತ್ತು ಮುಳುಗಹತ್ತಿದೆ. ಪಡುವಣದಂಚಿನಲ್ಲಿ ಹೊಂಗದಿರ ಅಡಗಹತ್ತಿದ್ದಾನೆ. ವೇಳೆ ಕಳೆಯಲು ವೇಷ ಧರಿಸಿ ಹೊರಗೆ ಹೊರಟನು.

ನಿತ್ಯ ರೂಢಿಯಂತೆ ಊರ ಹೊರಗೆ ನಡೆದ ದಾರಿಯಲ್ಲಿಯ ಬಾನುದ್ದ ಬೆಳೆದು ನಿಂತಿರುವ ವೃಕ್ಷಗಳೂ, ಅಡಗಿ ನಿಂತು ಸುಗಂಧ ಸೂಸುವ ಅಡವಿ ಮಲ್ಲಿಗೆಗಳೂ ಅನಂತನಲ್ಲಿ ಆಲ್ಹಾದವನ್ನುಂಟುಮಾಡಿದವು. ಸೃಷ್ಟಿಯ ವೈಚಿತ್ರ್ಯಪೂರ್ವಕವಾದ ವೈವಿಧ್ಯತೆಯನ್ನು ಕಂಡು ಅಚ್ಚರಿಗೊಂಡನು ಅನಂತ. ನಿಸರ್ಗದ ಸೌಂದರ್ಯದಲ್ಲಿ ತಲ್ಲೀನನಾದನು. ಯಾವದೋ ನೆನಪಿಗಾಗಿ ಕೆಲ ಕಾಲ ಸಮಾಧಿಸ್ಥ ಯೋಗಿಯಂತೆ ಸುಮ್ಮನೇ ಕೂತನು.

ಮುಚ್ಚಿದ ಕಣ್ಣು ತೆರೆದು ನೋಡಿದ. ಆಕಾಶ ಅಂಚಿನಲ್ಲಿ ಆಗಲೇ ಚಂದಿರ ಕಾಣಿಸಿಕೊಂಡ. ಅನಂತನಿಗೆ ಒಂದು ರೀತಿಯ ಹೊಸ ಕಳೆ ಬಂದಂತಾಯಿತು. ಹಾಲು ಬೆಳದಿಂಗಳಲ್ಲಿ ವನ್ಯ ಕುಸುಮಗಳ ಪರಿಮಳ ಗಂಧವಾಹನನೊಂದಿಗೆ ಬಂದಾಗ ಅನಂತನ ಮನ ಹಂಸ ಗರಿಗೆದರಿತು. ಪ್ರೇಮರಸ ಉಕ್ಕಿ ಪ್ರಕೃತಿ ದೇವಿಯ ಪಾದ ತೊಳೆಯಿತು.

ದೂರದಲ್ಲಿ ಭರ್ರನೇ ಬರಲಿರುವ ಕಾರಿನ ಸಪ್ಪಳ ಈ ಅಮೃತಯೋಗವನ್ನು

ಕದಲಿಸಿತು. ನಿಮಿಷಾರ್ಧದಲ್ಲಿಯೇ ಕಾರು ಅನಂತನೆದುರಿನಲ್ಲಿಯೇ ಬಂದು ನಿಂತಿತು. ಅನಂತ ಆಶ್ಚರ್ಯದಿಂದ ಹೌಹಾರಿದನು. " ಯಾರವರು ? " ಎಂಬ ಧ್ವನಿ ಮೋಟರಿನಿಂದ ಹೊರಬರುವ ಮೊದಲೇ ತುಂಬ ಜವ್ವನೆಯಾದ ಬಾಲಕಿಯೊಬ್ಬಳು ಎದುರು ನಿಂತಳು. ಅವಳ ಅಂಗಕಾಂತಿ ಅನಂತನನ್ನು ಭ್ರಮೆಗೊಳಿಸಿತು. ಮಾತು ಮೌನ ತಾಳಿತು. " ತಾವು ಯಾರು? " ಎಂಬ ಪ್ರಶ್ನೆ ಮೌನವನ್ನು ಮುರಿಯಿತು.

" ನಾನೊಬ್ಬ ವಿದ್ಯಾರ್ಥಿ " ಎಂಬದು ಅನಂತನ ಉತ್ತರವಾಗಿತ್ತು.

" ಒಂಟಿಗರಾಗಿ ಇಲ್ಲೇಕೆ ? "

" ಹೌದು ಒಂಟಿಗನಾಗಿಯೇ ಇದ್ದೇನೆ "

" ಕಾರಿನಲ್ಲಿ ಊರಿನ ವರೆಗೆ ಬರುತ್ತೀರೊ ? "

" ಕ್ಷಮಿಸಿ. "

ಕಾರು ಇಮ್ಮಡಿ ವೇಗದಿಂದ ಓಡಿತು. ಆದರೆ ಕಾರಿನಲ್ಲಿಯ ಮೂರ್ತಿ ಮಾತ್ರ ಹೃದಯದಂಚಿನಲ್ಲಿ ಮೂಡಿ ನಿಂತಿತು. ನಡೆದುದೆಲ್ಲವೂ ಕನಸಿನಂತೆ ಭಾಸವಾಯಿತು. ಹೌದು ಪ್ರಪಂಚದಲ್ಲಿ ನಡೆಯುವದೆಲ್ಲವೂ ಒಂದು ಸ್ವಪ್ನ ದಾಟ. ಮಾನವನ ನೈತಿಕ ಬಾಳ್ವೆಯೂ ಒಂದು ಕನಸಿನ ಕಟ್ಟಡ ಎಂದು ವಿಚಾರಿಸುತ್ತಲೇ ರೂಮಿಗೆ ಬಂದನು. ನಿಸರ್ಗ ಸೊಬಗಿನ ಅನ್ನವನ್ನೇ ಉಂಡ ಅನಂತ ಏಳೂವರೆ ಆದರೂ ಹಾಗೆಯೇ ಮಲಗಿದ್ದನು. ನೆರೆಮನೆಯವರು ಬಂದು ಒದರಿದಾಗ " ಓ " ಎಂದು ಎದ್ದನು.

ನಿತ್ಯ ರೂಢಿಯಂತೆ ಪ್ರಾತರ್ವಿಧಿಗಳೆಲ್ಲವೂ ಮುಗಿದ ಮೇಲೆ ಬಲ್ಲವನಾಗಿ ಅಡಿಗೆ ಮಾಡಿದನು. ಊಟದ ಶಾಸ್ತ್ರವೂ ಮುಗಿಯಿತು. ಗಡಿಯಾರವು ಹನ್ನೊಂದು ಬಡಕೊಂಡದ್ದರಿಂದ ಕಾಲೇಜಕ್ಕೆ ಓಡಿದನು. ಹಳ್ಳಿಯ ಮಾದರಿಯ ಹಾವೇರಿ ಹಾಯಸ್ಕೂಲಿನಲ್ಲಿ ಓದಿದ್ದರಿಂದ ಅನಂತನಲ್ಲಿ ಇನ್ನೂ ಅವೇ ವಿಚಾರಗಳೇ ಇದ್ದವು. ಆದರೆ ಪಟ್ಟಣದಲ್ಲಿ ನಡೆಯುವದೆಲ್ಲವನ್ನೂ ಪಾಪ! ಅವನು ಹೇಗೆ ಅರಿಯಬಹುದು?

ಕಾಲೇಜು ಇನ್ನು ನಾಲ್ಕಡಿ ಇರುವಾಗಲೇ ಮೊದಲಿನ ಘಂಟೆ ಬಡಕೊಂಡಿತು. ಅನಂತ ಅವಸರದಿಂದ ಕ್ಲಾಸ ರೂಮು ಸೇರಿದನು. ಆದರೆ ಡೆಸ್ಕ ಟೇಬಲ್ಲಗಳೇ ಅನಂತನನ್ನು ಸ್ವಾಗತಿಸಿದವು! ಕ್ಷಣಹೊತ್ತು ಪುಸ್ತಕ ತೆಗೆದು

ಅಂದಿನ ಪಾಠ ನೋಡುತ್ತ ಒಬ್ಬನೇ ಕೂತನು. ಅಷ್ಟರಲ್ಲಿ ಬಿಳಿಬತ್ತಿಯನ್ನು ಬಾಯಲ್ಲಿಟ್ಟುಕೊಂಡ ಹುಡುಗನೊಬ್ಬನು ಬಂದು "ಇಂದು ಫಸ್ಟ ಪಿರಿಯಡ್ ಇಲ್ಲ, ಪ್ರೊಫೆಸರರು ಯಾವದೋ ಪಾರ್ಟಿ ಸಲುವಾಗಿ ಹಾಟೆಲ್ಲಿನಲ್ಲಿ ಕೂತಿದ್ದಾರೆ" ಎಂದನು. ಖೋಲಿಯಲ್ಲಾದರೂ ಅಭ್ಯಾಸ ಮಾಡಲೆಂದು ಅನಂತ ರೂಮಿಗೆ ತಿರುಗಿದನು.

ದಿನಗಳೆದಂತೆ ಅನಂತ ಹೊಸ ವಾತಾವರಣಕ್ಕೆ ರೂಢಿಸಿಕೊಂಡು ಹೋಗಹತ್ತಿದ್ದ. ಆದರೂ ಕ್ಲಾಸಿನಲ್ಲಿ ಒಬ್ಬನೇ ಪ್ರತ್ಯೇಕವಾಗಿ ಇರಹತ್ತಿದ. ಎಲ್ಲದಕ್ಕೂ ಅವನದೇ ರೀತಿ, ಅವನದೇ ನೀತಿ, ಹೀಗೆ ಬೇರೆಯಾಗಿಯೆ ನಡೆದಿತ್ತು ಕಾಲೇಜಿನಲ್ಲಿಯ ಅನಂತನ ಬಾಳುವೆ. ಆದರೆ ಅನಂತನ ಈ ಇರುವಿಕೆಯ ಅರ್ಥವನ್ನು ಒಬ್ಬ ಅಧ್ಯಾಪಕ ಮಾತ್ರ ಅರಿತಿದ್ದರು. ಅನಂತನ ಪ್ರತಿಯೊಂದು ಚಟುವಟಿಕೆಯನ್ನು ತೀಕ್ಷ್ಣವಾಗಿ ನಿರೀಕ್ಷಿಸುತ್ತಲೇ ಇದ್ದರು. ತಿಂಗಳೆರಡು ಉರುಳುವ ಮೊದಲೇ ಇವನಿಗಾಗಿ ಕಾದಿದ್ದ ಚಳಿಗಾಲದ ರಜೆಯು ಪ್ರಾರಂಭವಾಯಿತು.

## ೩

ಕಾಲೇಜ ಜೀವನದಿಂದ ಹುಡುಗ ಬದಲಾಗಿರಬಹುದೆಂದು ಭಾವಿಸಿದ್ದ ಊರ ಜನರಿಗೆ ಅನಂತ ನಿರಾಶೆಯನ್ನುಂಟುಮಾಡಿದನು. ಅದೇ ವೇಷ, ಅದೇ ಭೂಷಣ, ಎಲ್ಲವೂ ಮೊದಲಿನಂತೆಯೇ. ಆದರೆ ಅಕ್ಷರತೆಯಿಂದ ಆಪ್ತೇಯತೆ, ಶೈಕ್ಷಣಿಕತೆಯಿಂದ ಸೌಜನ್ಯತೆಗಳು ಮೊದಲಿಗಿಂತ ಅಧಿಕವಾಗಿದ್ದವು.

ವಯಸ್ಸಾದ ತಂದೆ-ತಾಯಿಗಳು ಮಗನ ಭವಿತವ್ಯತೆಯ ಬಗ್ಗೆ ಹೊಸ ಹೊಸ ಕನಸುಗಳನ್ನು ಕಾಣಹತ್ತಿದರು. ಕೋಲಳ್ಳಿ ತುಂಬೆಲ್ಲ ಅನಂತನದೇ ಮಾತು. ಹಳ್ಳಿಯಲ್ಲಿ ಕಲಿತವರೆಂದರೆ ಅಪರೂಪ. ಕಾಲೇಜ ಶಿಕ್ಷಣವೆಂದರೆ ವಿಚಾರಾತೀತ, ಅನಂತನೆಂದರೆ ಅವರಿಗೊಂದು ಹೆಮ್ಮೆ.

ಒಂದು ದಿನ ಊಟಕ್ಕೆ ಕೂತಾಗ ಸಹಜವಾಗಿ ಕಮಲಾಬಾಯರು "ಅನಂತಾ ಮ್ಯಾಟ್ರಿಕ್ಕೂ ಆದಿ, ಕಾಲೇಜಕ್ಕೂ ಹೋದಿ, ಮತ್ತs ಮದಿವಿ

ಇಷ್ಟು ಮಾಡಿಕೊಂಡ ಬಿಡಪಾ” ಎಂದರು. ವೆಂಕಟರಾಯರೂ “ರೂ” ಹಾಕಿದರು. ಅನಂತ ಮಾತ್ರ ಸುಮ್ಮನೇ ಇದ್ದನು. “ಅಲ್ಲಾ ಮತ್ತಃ ರಾಮಪುರದ ದೇಸಾಯರ ಮಗಳು ಸಾಲಂಕಾರ ಕನ್ಯಾ ಕೊಟ್ಟು ತಾವಃ ಮದಿವಿ ಮಾಡತಾರಂತ; ಮತ್ತೇನು ನೀವ ಹೇಳ್ರಿ” ಎಂದು ಕಮಲಾಬಾಯರು ಪುನಃ ಅಂದರು. ರಾಯರು “ಇಲ್ಲಿ ನೋಡ ಇಲ್ಲಿ, ಏ ಅನಂತಾ ಆಕೇನು ಅಂದ್ಲಲ್ಲ ಅದೆಲ್ಲಾ ಖರೇ ಅದ, ಮ್ಯಾಲೆ ನಿನಗ ಕಲೀಲಿಕ್ಕೂ ರೊಕ್ಕಾ ಕೊಡ ತಾರಂತ ಇದಲ್ಲದ ಕಲಿತ ಮ್ಯಾಲೆ ನವಕರಿ ಸಹಿತ ಕೊಡಸ್ತಾರಂತ” ಅಂದರು. ಅನಂತನ ಮುಖಮುದ್ರೆಯೆ ನಕಾರಾತ್ಮಕ ಉತ್ತರ ನೀಡಿತು. ವಿಚಾರದ ಸುಳಿಯಲ್ಲಿ ಸಿಕ್ಕು ಸುತ್ತಾಡಿದನು. “ಹಣ ಸ್ವೀಕರಿಸಿ ಯಾಕೆ ಮದುವೆ ಮಾಡಿಕೊಳ್ಳಬಾರದೆಂದು” ತನ್ನನ್ನೇ ತಾನು ಪ್ರಶ್ನಿಸಿಕೊಂಡನು. ಆದರೆ ಮರು ನಿಮಿಷದಲ್ಲಿಯೇ. ಹೆಣ್ಣಿನ ಹಣದಿಂದ ವಿದ್ಯೆ ಗಳಿಸುವದು ಸ್ವಾಭಿ ಮಾನಕ್ಕೆ ಸಲ್ಲದ ಮಾತೆಂದು ಭಾವಿಸಿದನು. ಕೊನೆಗೊಮ್ಮೆ ಇಳಿ ಧ್ವನಿಯಲ್ಲಿ ‘ಸದ್ಯ ಒಲ್ಲೆ’ ಎಂದು ನುಡಿದನು.

ಊರಲ್ಲಿ ಎಲ್ಲ ಓರಿಗೆಯವರನ್ನು ಭೆಟ್ಟಿಯಾಗಿ ಬಂದಂತೆ ಲಚ್ಚಮ್ಮನ ಭೆಟ್ಟಿಗೂ ಅನಂತ ಹೋಗದಿರಲಿಲ್ಲ. ಲಚ್ಚಮ್ಮನ ವೃತ್ತಿ ಹೀನವಿದ್ದರೂ ಮನ ವ್ಯಕ್ತಿತ್ವಗಳೆರಡೂ ವಿಶಾಲವಾಗಿದ್ದವು. ಅನಂತನಂಥ ಒಬ್ಬ ಸತ್ಪುರುಷನು ತನ್ನ ಮನೆಗೆ ಬಂದಿರುವದೇ ಭಾಗ್ಯವೆಂದು ಭಾವಿಸಿ ಹಣ್ಣು-ಹಾಲುಗಳನ್ನು ಅನಂತನಿಗೆ ಕೊಟ್ಟಳು. ಬಾಳುವೆಯ ಬೀಳು ಏಳುಗಳನ್ನೂ, ಕಹಿ ಸಿಹಿ ಗಳನ್ನೂ ವಿವರವಾಗಿ ನಿರೂಪಿಸಿದಳು. ದಿನಾಲೂ ಜಗಳಾಡುತ್ತಿರುವ ಮಗ ಮಲ್ಲನ ಬಗ್ಗೆ ದೂರು ಹೇಳಿ ನಿಡಿದಾದ ನಿಟ್ಟುಸಿರಿಟ್ಟು “ಅಂತಪ್ಪಾ, ನನಗೇನೂ ಬ್ಯಾಡ. ನನ್ನ ಮಲ್ಯಾನೂ ನಿನ್ಹಾಂಗ ಕಲಿತು ಶ್ಯಾಣ್ಯಾ ಆದ್ರ ನನ್ನ ಎದಿ ಜೈಯತೈತಿ, ಯಪ್ಪಾ ನನ್ನ ಮಲ್ಯಾನೆ ನನಗ ಎಲ್ಲಾ, ಮಾಸ್ತರಗ ಹೋಗಿ ಕ್ಯಾಸ ಓದ ಹೇಳಾಕ ಮೂರು ರೂಪಾಯಿ ಗೊತ್ತು ಮಾಡಿನಿ. ಏಟ ಮಾಡಿ ದರೂ ಮತ್ತಃ ಜಗಳಾ ತಕ್ಕೊಂಡ ಬರತಾನ ಏನ ಮಾಡ್ಲಿ ಶಿವನ ಅನಸೈತಿ” ಎಂದಳು. ಅನಂತ ಅವಳ ಹೆಬ್ಬಯಕೆಗಾಗಿ ಹಿಗ್ಗಿದನು. ತನಗೆ ಒಪ್ಪೊತ್ತಿನ ಊಟ ಅಭಾವ ಇರುವಾಗ ತನ್ನ ಕಾಯಕದಿಂದಲೇ ಹಣ ಗಳಿಸಿ, ತನ್ನ ಸರ್ವಸ್ವವೇ ಮಲ್ಲನೆಂದು ಭಾವಿಸಿ, ಮಲ್ಲನಿಗಾಗಿ ಎಲ್ಲ ಯಮಯಾತನೆಗಳನ್ನು ಮರೆತು,

ಅವನ ಉತ್ಕರ್ಷವೇ ತನ್ನ ಉಸಿರೆಂದು ಗ್ರಹಿಸಿ, ಮಗನ ಭವಿಷ್ಯತ್ತಿಗಾಗಿ ತನ್ನ ಬಾಳನ್ನಾದರೂ ಬಲಿಕೊಡಲು ಸಿದ್ಧಳಾದ ಲಚ್ಚವ್ವನ ಮೂರ್ತಿಯು ಅನಂತನಿಗೆ ಅನಾದೃಶವಾಗಿ ಕಂಡಿತು.

ಮೋರೆ ಗಂಟಿಕ್ಕಿಕೊಂಡು ಮಲ್ಲ ಶಾಲೆಯಿಂದ ಬಂದನು.

"ಯಾಕೋ ಮಲ್ಲಪ್ಪಾ ಗಡಾ ಬರಲಿಲ್ಲಾ? ಓದೋದು ಜೋರಿತ್ತೇನು?" ಎಂದಳು ಲಚ್ಚವ್ವ.

" ಹೂಂ. "

" ಹಾಗ್ಯಾಕಂತೀಯೊ? ಯಾವಾತೇನಂದ? "

ಆದರೂ ಮಲ್ಲ ಮಾತ್ರ ಬೆಲ್ಲ ಒಡೆವ ಕಲ್ಲಿನಂತೆ ಹಾಗೆಯೇ ನಿಂತ.

ಕೊನೆಗೆ ಅನಂತ " ಮಲ್ಲಾ ಏನಾತೊ? " ಎಂದು ಕೇಳಿದ.

ಮಲ್ಲನ ಸ್ವಾಭಿಮಾನಕ್ಕೆ ವಜ್ರಾಘಾತವಾಗಿದೆಯೆಂಬುದನ್ನು ಪಾಪ ಅನಂತನೇನು ಬಲ್ಲ! ಅನಂತನ ಅಂತಃಕರಣವು ಸೀರಾಯಿತು. " ಮಲ್ಲಾ ಏನಾತು? " ಎಂದು ಪುನಃ ಕೇಳಿದನು.

" ಆ ಮಾಸ್ತರು ಸೀರ ತತಾ ಅಂದ್ರಿ, ತರಾಕ ಹೋದಾಗ ಕೊಡಪಾನ ಒಜನ ಇತ್ರಿ ಅದಕ್ಕs ಕೆಳಗ ಬಿತ್ತಿ, ಮಾಸ್ತರ ಸಿಟ್ಟಿಗೆದ್ದ ಕ್ಯಾಸ ಜಗ್ಗಿ ಬಡದ್ರಿ" ಎಂದು ಅನ್ನುತ್ತ ರೋದನವನ್ನೇ ಪ್ರಾರಂಭಿಸಿದ ಮಲ್ಲ.

ಅನಂತ ಸಮಾಧಾನ ಮಾಡಹತ್ತಿದನು. ಅನಂತನ ಕರಗಳು ಮಾತ್ರ ಮಲ್ಲನ ಮೈಮೇಲೆಲ್ಲ ಆಲುಗಾಡಹತ್ತಿದವು.

" ಅಂತಪ್ಪಾ ಏನೋ ಮಾಸ್ತರು ನಮ್ಮ ಬಗೇರು ಅಂತ ಹಣಾಕೊಟ್ಟು, ವಿದ್ಯಾ ಕಲಸ್ರಿ ಅಂದ್ರ ಇದು ನೋಡೆಪ್ಪ" ಎಂದು ಲಚ್ಚವ್ವ ಅನ್ನುವಾಗ ಅವಳ ಕಣ್ಣುಗಳಂಚಿನಲ್ಲಿ ಹನಿಗಳು ಕಾಣಿಸಿಕೊಂಡವು.

" ಲಚ್ಚವ್ವಾ ಮಾಸ್ತರರು ಯಾವಾಗರ ಕೆಲಸ ಹೇಳಿದರ, ಮಾಡ ಬೇಕ ನೋಡು, ಯಾಕಂದರ ಹಿರೇರ ಮಾತ ಕೇಳೊ ಚಟಾ ಬಲಿತದ" ಎಂದು ಅನಂತ ತನ್ನ ವಿದ್ಯಾವ್ಯಾಸಂಗದ ಟಿಪ್ಪಣಿ ಹಚ್ಚಿ ಮಾತಾಡಿದನು. ಆದರೆ ಪ್ರತಿಯೊಬ್ಬರ ದೈನಂದಿನ ಗುಣಾವಗುಣಗಳನ್ನೂ, ಅಂತರಾಳದ ಬಹು ಸೂಕ್ಷ್ಮ ರೇಖೆಗಳನ್ನೂ ಬಲ್ಲ ಲಚ್ಚವ್ವ ನೋವಿನ ನಗೆಯೊಂದನ್ನು ಬೀರುತ್ತ

“ ನಮ್ಮೂರು ನಮಗಾಗೋದಿಲ್ಲ ಅಂತಪ್ಪಾ ” ಎಂದಳು.

“ ಲಚ್ಚವ್ವ ಈ ಜಗದಾಗ ಹೀಂಗ ಅಂತ ಹೇಳಲಿಕ್ಕೆ ಬರೂದಿಲ್ಲ ನೋಡು. ಕತ್ತಲಿ ಹೋದಮ್ಯಾಲೆ ಬೆಳಕು ಬರಲಿಕ್ಕೇ ಬೇಕು ” ಎಂದು ಅನಂತ ನುಡಿದನು. ಇದೆಲ್ಲವೂ ಲಚ್ಚವ್ವನಿಗೆ ಮಾತ್ರ ವಾಸ್ತವಿಕ ಜಗತ್ತಿನ ನಗ್ನ ಸತ್ಯವಾಗಿ ತೋರಿತು. ಲಚ್ಚವ್ವನಿಗೆ ಹೇಳಿ ಅನಂತ ಮನೆಗೆ ಹೊರಟನು.

ಜನಾಂಗದ ಜೀವಾಳವನ್ನೇ ತಿದ್ದುವ, ಪಾವಿತ್ರತೆಯ ದ್ಯೋತಕವಾದ ಶಿಕ್ಷಕವೃತ್ತಿಯ ಬಗ್ಗೆ ಇದ್ದ ಅಭಿಮಾನಗಳು ಅನಂತನಲ್ಲಿ ಅರಗಹತ್ತಿದವು.

“ ಯಪ್ಪಾ ಮಲ್ಲಪ್ಪಾ ನಿನ್ನಾವ ” ಎಂದು ಅಂದ ಲಚ್ಚವ್ವನ ಮಾತು “ ನಾ ಹೋದಲ್ಲೆ ನೀ ಬರತೀ ಅಂತಣ್ಣ ” ಎಂಬ ಮಲ್ಲನ ಮಾತುಗಳು ಅನಂತನ ಹೃದಯದಲ್ಲಿ ಆಳವಾಗಿ ನಿಂತವು. ಲಚ್ಚವ್ವನ ಮನೆಯಿಂದ ಹೊರಗೆ ಬರುವ ಅನಂತನನ್ನು ಪುರಾಣದ ಆಚಾರ್ಯರ ಹೆಂಡತಿ ಗಂಗಾಬಾಯರು ನೋಡಿದ್ದರು. ಆದರೆ ನೀತಿ ಶಾಂತಿಗಳ ಮೂರ್ತಿಮಂತನಾದ ಅನಂತನಿಗೆ ಗಂಗಾಬಾಯಿಯಿಂದ ಆಗುವ ಹಂಗು ಹೆದರಿಕೆಗಳಾದರೂ ಯಾವವು ?

ಮನೆಗೆ ಬಂದು ತಾಯಿ ಎದುರಿನಲ್ಲಿ ಲಚ್ಚವ್ವನ ಆಶೆ ಆಕಾಂಕ್ಷೆಗಳನ್ನು ಒಂದು ಬಿಡದೆ ಉಸಿರಿದನು. ಅವಳ ಗೌರವಯುಕ್ತ ಗುಣಗಳಿಗಾಗಿ ಕಮಲಾಬಾಯರೂ ಬಾಯಿತುಂಬ ಹೊಗಳಿದರು. ಅಭ್ಯಾಸ ಮಾಡುವ ವೇಳೆ ಆಗಿದ್ದರಿಂದ ಅನಂತನು ಖೋಲಿಗೆ ಹೋದನು. ಪುರಾಣದ ಘಂಟೆ ಬಾರಿಸಿದ್ದರಿಂದ ಕಮಲಾಬಾಯರು ಗುಡಿಗೆ ಹೋದರು.

ಅಲ್ಲಿ ಆಗಲೇ ಆರಂಭವಾಗಿತ್ತು ಅನಂತನ ಪುರಾಣ. ಅನಂತ ಲಚ್ಚವ್ವನ ಮನೆಗೆ ಹೋಗಿ ಬಂದದ್ದೂ ಅಲ್ಲಿ ಫಲಾಹಾರ ಮಾಡಿದ್ದೂ ಇವೇ ಪುರಾಣದ ವಿಷಯಗಳಾಗಿದ್ದವು. ಎಲ್ಲರೂ ಒಳಗೊಳಗೆ ಗುಣಗುಡುತ್ತಿದ್ದರು. ಆಗೊಮ್ಮೆ ಈಗೊಮ್ಮೆ ಸಭಾಪತಿ ಆಚಾರ್ಯರು ಅಧಿಕಾರವಾಣಿಯಿಂದ ಅಭಿಪ್ರಾಯ ಕೊಡುತ್ತಿದ್ದರು. ಆಚಾರ್ಯರ ವಾಣಿ ಮುಂಗಾರಿಯ ಗುಡುಗಿನಂತೆ ಗುಡುಗಿ ಗುಡಿಯನ್ನೆಲ್ಲ ನಡುಗಿಸಿತು. ನಂತರ ಮೋಡ ಕವಿದು ಮಳೆಯೂ ಆಯಿತು. ಆದರೆ ನೀರು ಮಾತ್ರ ಕಮಲಾಬಾಯರ ಕಣ್ಣುಗಳಿಂದ ಇಳಿದವು. “ ಕಮಲಾಬಾಯ್ರ ಬ್ರಾಂಬರು ಶೂದ್ರರ ಮನ್ಯಾಗ ಊಟಾ ಮಾಡಿದ್ರ ಕುಲಾ ಹ್ಯಾಂಗ ಉಳಿತದ್ರಿ” ಎಂಬ ಬಾಣ ಬಾಯರ ಎದೆಯಲ್ಲಿ ನಟ್ಟಿತು. ತುಂಬಿದ ಕಂಠದೊಡನೆ ಆಚಾರ್ಯ

ರೊಡನೆ ಅನಂತನ ಪರವಾಗಿ ಕ್ಷಮೆ ಕೇಳಿದರು. ಕಮಲಾಬಾಯರ ನಿಷ್ಕಲ್ಮಷ ಹೃದಯದ ಅಂತರಾಳವನ್ನು ಅರಿಯುವ ಶಕ್ತಿ ಕಲ್ಲು ಹೃದಯದ ಜಾತ್ಯಾಂಧರಲ್ಲಿ ಹೇಗೆ ಇರಬಹುದು! ನಡೆದ ಪುರಾಣ ಮುಗಿದ ನಂತರ ಭಾರವಾದ ಹೃದಯ ದಿಂದ ಕಮಲಾಬಾಯರು ಮನೆಗೆ ತಿರುಗಿದರು.

ಅನಂತನ ಮುಂದೆ ನಡೆದುದೆಲ್ಲವನ್ನೂ ಹೇಳಿದರೆ ಕೋಮಲ ಮನವೆಲ್ಲಿ ಮುದುಡುವದೋ ಎಂಬ ಭೀತಿಯಿಂದ ಒಡಲಿನಲ್ಲಿಯೇ ನುಂಗಿಕೊಂಡರು ಕಮಲಾಬಾಯರು. ಮರುದಿನ ಒಂದುಸೇರು ಅಕ್ಕಿ, ಎಂಟು ಆಣೆ ದಕ್ಷಿಣೆ ಯನ್ನು ಮುಸುಗಿನಲ್ಲಿ ಒಯ್ದು ಆಚಾರ್ಯರಿಗೆ ದಾನರೂಪದಲ್ಲಿ ಅರ್ಪಿಸಲು, "ಇದು ಪ್ರಾಯಶ್ಚಿತ್ತ" ಎಂದು ಅನ್ನುತ್ತ ಆಚಾರ್ಯರು ಸ್ವೀಕರಿಸಿ ಭೋಜನಕ್ಕೆ ಬರಲು ಸಮ್ಮತಿಸಿದರು. ಅಂದಿನಿಂದ ಅನಂತನ ಪುರಾಣ ಗುಡಿಯಲ್ಲಿಯೇ ಗುಪ್ತವಾಗಿ ಶಿಲೆಯ ರೂಪದಲ್ಲಿಯ ಅನಂತನಲ್ಲಿ ಐಕ್ಯೈಕತೆಯನ್ನು ಪಡೆಯಿತು.

ಅನಂತನಿಗೂ ನಡೆದ ಸಂಗತಿಯ ಸುಳಿಗಾಳಿ ತಾಕಿತು. ಆದರೆ ರಜೆಯ ದಿನಗಳೆಲ್ಲವೂ ಮುಗಿದು ಧಾರವಾಡಕ್ಕೆ ಹೋಗುವದು ನಿಶ್ಚಿತವಾಗಿದ್ದರಿಂದ ಅದರಲ್ಲಿ ಮನಸ್ಸು ಹಾಕಲಿಲ್ಲ. ಅನಂತ ಆಧುನಿಕನಿದ್ದರೂ ಭಾವಿಕರ ಮನ ನೋಯಿಸಲು ಅಂಜುತ್ತಿದ್ದನು.

೪

ಪ್ರಥಮ ವರ್ಷದ ಪೂರ್ವಾರ್ಧದೊಳಗೆ ಧಾರವಾಡದ ವಾತಾವರಣ ವನ್ನು ಅನಂತ ಮೈಗೂಡಿಸಿಕೊಂಡಿದ್ದ. ಕೋಲಳ್ಳಿ ಧಾರವಾಡದ ಅಂತರವು ಮಾಯವಾಯಿತು. ಮೊದಲಿನ ಖೋಲಿಯಲ್ಲಿಯೇ ಊಟದ ವ್ಯವಸ್ಥೆ ಮೊದಲಿ ನಂತೆಯೇ ಸಾಗಿತು. ಸರಕಾರೀ ಕಾಲೇಜು ಬಿಟ್ಟು ಖಾಸಗೀ ಕಾಲೇಜಿನಲ್ಲಿ ಹೆಸರು ನೋಂದಾಯಿಸಿದನು. ಕಾಲೇಜು ಸಣ್ಣದಿದ್ದುದರಿಂದ ವಿದ್ಯಾರ್ಥಿ ಅಧ್ಯಾಪಕರಲ್ಲಿ ಪರಸ್ಪರ ಪರಿಚಯ ಉಂಟಾಯಿತು. ಅನಂತನ ವ್ಯಕ್ತಿ ವಿಕಾ ಸಕ್ಕೆ ಇದು ವಿಶೇಷ ರೀತಿಯಲ್ಲಿ ಸಹಾಯವಾಯಿತು. ಅನಂತನ ಆಶೆಯ ಅಂಕುರಕ್ಕೆ ಅಧ್ಯಾಪಕರ ನೆರವಿನ ನೀರು ದಿನಾಲು ದೊರೆಯಹತ್ತಿತು.

ಮೊದಲನೇ ವರುಷದ ಅಭ್ಯಾಸವೂ ಅಷ್ಟು ಇರಲಿಲ್ಲ. ಆದರೂ ಪರೀಕ್ಷೆ ಸಮೀಪಿಸಿದ್ದರಿಂದ ಅಭ್ಯಾಸ ಮಾಡಲೇಬೇಕಾಗಿತ್ತು. ಅಭ್ಯಾಸದ ಪ್ರವಾಹ ವೇಗವಾಗಿ ಹರಿಯಹತ್ತಿತು. ಅದಕ್ಕನುಗುಣವಾದ ವಾತಾವರಣವನ್ನೇ ಅನಂತ ನಿರ್ಮಿಸಿಕೊಂಡ. ಇದರ ಸಂಗಡ ಜೀವನವಿಕಾಸಕ್ಕವಶ್ಯವಾದ ಪತ್ರಿಕೆ ಪ್ರಕಟನೆಗಳನ್ನೂ, ಪುಸ್ತಿಕೆ ಮಾಸಿಕಗಳನ್ನೂ, ಓದುತ್ತಲೇ ಇದ್ದನು. ರಾಜಕೀಯ ಸಭೆ ಇರಲಿ, ಧಾರ್ಮಿಕ ಸಮ್ಮೇಲನ ಇರಲಿ, ಸಾಹಿತ್ಯಗೋಷ್ಠಿ ಇರಲಿ ಎಲ್ಲವುಗಳಲ್ಲಿಯೂ ಎದ್ದು ಕಾಣುತ್ತಿದ್ದನು. ಓದುಗರಿಗಾಗಿ ನಿರ್ಮಾಣ ವಾದ ನವ ವಾಚನಾಲಯದ ಪ್ರಥಮ ಸದಸ್ಯ ಅನಂತನೇ ಆದನು. ಹೀಗಾಗಿ ಅವನಲ್ಲಿ ಜ್ಞಾನಸಂಚಯ ದಿನದಿನವೂ ವೃದ್ಧಿಂಗತವಾಗುತ್ತಲೇ ಇದ್ದಿತು. ತಲೆ ಯಲ್ಲಿ ತಳವೂರಿದ ಜ್ಞಾನಘಟ್ಟಿ ಕಥೆ-ಕಾದಂಬರಿಗಳಲ್ಲಿ ಇಳಿಯಹತ್ತಿತು. ಕಾವ್ಯಗಳು ಅಲ್ಲಲ್ಲಿ ಕಾಣಿಸಿಕೊಳ್ಳಹತ್ತಿದವು.

ರಾತ್ರಿ ಹತ್ತೂವರೆಗೆ ಮಲಗುವದು, ಮುಂಜಾನೆ ಮೂರೂವರೆಗೆ ಏಳು ವದು, ಎದ್ದ ನಂತರ ಚಹಾಪಾನ ಮಾಡಿ ಅಭ್ಯಾಸಕ್ಕೆ ಕೂಡ್ರುವದು, ಆರೂ ವರೆಗೆ ಸ್ನಾನ ಮುಗಿಸಿ, ಆನ್ಹಿಕ ತೀರಿಸಿ, ಸರಸ್ವತಿ ಆರಾಧನಾ ಮಾಡುವದು, ಒಂಬತ್ತು ಬಾರಿಸುವ ಮೊದಲೇ ಅನ್ನಬ್ರಹ್ಮನ ಸಾಕ್ಷಾತ್ಕಾರಕ್ಕಾಗಿ ಅಗ್ನಿ ನಾರಾಯಣನನ್ನು ಪ್ರತಿಷ್ಠಿಸುವದು, ಅನ್ನಯಜ್ಞ ಮುಗಿದ ಕೂಡಲೇ ಕಾಲೇಜಿಗೆ ಹೋಗುವದು, ಕಾಲೇಜ ಅವಧಿ ತೀರಿದ ನಂತರ ನೇರವಾಗಿ ಶಾರದಾಮಂದಿರಕ್ಕೆ ಹೋಗುವದು, ಆಮೇಲೆ ಹವೆ ತಿನ್ನುವ ಹವ್ಯಾಸಕ್ಕಾಗಿ ಅಲ್ಲಲ್ಲಿ ತಿರುಗಾಡಿ ಏಳೂವರೆಯ ಮೊದಲೇ ಮನೆ ಮುಟ್ಟುವದು, ಹೀಗೆ ಸಾಗಿದೆ ಅನಂತನ ದೈನಂದಿಕ ಜೀವನ.

ಕಣ್ಣುಮುಚ್ಚಿ ಕಣ್ಣು ತೆರೆಯುವ ಮೊದಲೇ ಪರೀಕ್ಷೆ ಪ್ರಾರಂಭ ವಾಯಿತು. ಮೂರು ದಿನಗಳ ನಂತರ ಮುಗಿದುಹೋಯಿತು. ಪರಿಣಾಮ ತಿಳಿಯದ ವಿನಃ ಊರಿಗೆ ಹೋಗಬಾರದೆಂದು ಧಾರವಾಡದಲ್ಲಿಯೇ ತಂಗಿದನು. ಮಾರ್ಚ ಹತ್ತನೇ ದಿನಾಂಕದ ಪೇಪರಿನಲ್ಲಿ ಅನಂತನ ಹೆಸರು ಪ್ರಥಮಶ್ರೇಣಿ ಯಲ್ಲಿ ಪ್ರಥಮವಾಗಿ ಬಂದಿತ್ತು. ಪಟ್ಟ ಶ್ರಮ, ಅನುಭವಿಸಿದ ಅನುತಾಪಗಳಿಗೆ ದೊರೆತ ಪ್ರತಿಫಲ ತಕ್ಕುದೆಂದು ಅನಂತ ಪ್ರಫುಲ್ಲನಾದನು. ಅಪ್ರತ್ಯಕ್ಷವಾಗಿ

ಅನಂತ ಎಲ್ಲರ ಸ್ನೇಹಿತನಾದನು. ಎಲ್ಲ ಕಡೆಯಿಂದಲೂ ಅಭಿನಂದನೆಗಳು ಬರಹತ್ತಿದವು.

ಒಂದು ದಿನ ಮುಚ್ಚಂಜೆ ವಿಹಾರಕ್ಕಾಗಿ ಸಂಗಡಿಗರೊಂದಿಗೆ ನಡೆದಿದ್ದ. ಹಿಂದಿನಿಂದ ನಡುಹರೆಯದ ಯುವತಿಯೊಬ್ಬಳು ಬಂದು " Hallow congratulations " ಎಂದು ಅಂದು ಕಿನ್ನರಿಯಂತೆ ಹಾರಿಹೋದಳು. ಆದರೆ ಅನಂತನಿಗೆ ಅದು ಸ್ವಪ್ನಸದೃಶವಾಗಿ ಕಂಡಿತು. ಎಲ್ಲಿಯೊ ಒಮ್ಮೆ ನೋಡಿದ ಗುರುತಿನ ಗೆರೆ ಮಾತ್ರ ಸ್ಮೃತಿಪಟಲದಲ್ಲಿ ಮೂಡಿತು. ಜೊತೆಯಲ್ಲಿಯ ನೇಹಿಗರು ಈ ಒಗಟಿನ ಗುಟ್ಟನ್ನು ಕೇಳಿದರು. ಅನಂತನಿಗೆ ಅದು ಒಂದು ಯಕ್ಷಪ್ರಶ್ನೆಯಾದಾಗ ಗೆಳೆಯರಿಗೆ ತಿಳಿಸುವದಾದರೂ ಹೇಗೆ ? " ಏನೂ ಗೊತ್ತಿಲ್ಲವೆಂದು " ಅಂದನು. ಕಾಲೇಜ ಹುಡುಗೆಯರ ಒಣ ಬೆಡಗಿಗಾಗಿ ಅಂಡಲೆಯುತ್ತಿರುವ ಗೆಳೆಯರಿಗೆ ಅನಂತನ ಉತ್ತರ ಗರಳಪ್ರಾಯವಾಗಿ ಕಂಡಿತು. ಅನಂತನ ಮನವನ್ನು ಕೊರೆಯುತ್ತಿರುವ ಅನಂತ ಪ್ರಶ್ನೆಗಳಲ್ಲಿ ಇದೂ ಒಂದಾಯಿತು. ಅನಂತನನ್ನು ಪೀಡಿಸಲು ಗೆಳೆಯರಿಗೂ ಇದು ಸಾಧನವಾಯಿತು.

ಈ ಬಾರಿಯ ಸೂಟಿಯು ದೀರ್ಘವಾಗಿದ್ದರೂ ಸಾಹಿತ್ಯನಗರದಿಂದ ದೂರ ಹೋಗಲು ಅನಂತ ಇಚ್ಛಿಸಲಿಲ್ಲ. ಪ್ರಯತ್ನವಾದಿ ಅನಂತ ಸಣ್ಣ ಸಾಹಿತಿಗಳಲ್ಲಿ ಸಿದ್ಧಹಸ್ತನಾದನು. ಆದರೆ ತಾಯಿ ಊರಿನ ಕರೆ ಅನಂತನನ್ನು ಕೋಲಕ್ಕಿಗೆ ಬರುವಂತೆ ಮಾಡಿತು. ಹೋಗಿಬಂದದ್ದೂ ಆಯಿತು. ಮಳೆಯಾಗಿದ್ದರಿಂದ ಬೆಳೆಗಳೂ ಚೆನ್ನಾಗಿ ಬಂದಿದ್ದವು. ಮಗನ ಯಶಸ್ಸಿನೊಡನೆ ಮನೆ ತುಂಬ ದವಸಧಾನ್ಯ ಬಂದದ್ದು ರಾಯರಿಗೆ ಆನಂದ ನೀಡದಿರಲಿಲ್ಲ. ಸಂತೋಷದಿಂದ ' ಮುಂದೆ ಕಲಿಯಪ್ಪಾ ' ಎಂದು ಹೇಳಿ ಕಳಿಸಿದ್ದರು. ಅದಕ್ಕಾಗಿ ಅನಂತ ಇಮ್ಮಡಿ ಹುರುಪಿನಿಂದ ಸಾಗಿದ್ದ. ಕಲ್ಪನೆಯಲ್ಲಿ ಕಟ್ಟುತ್ತಿದ್ದ ಕಾದಂಬರಿ ಕಾಗದದ ಮೇಲೆ ಇಳಿಯುವ ಮೊದಲೇ ಜೂನ ಇಪ್ಪತ್ತು ಬಂದಿತು. ಕಾಲೇಜು ಬಾ ಎಂದು ಅನಂತನನ್ನು ಕರೆಯಿತು.

ಹೊಸ ವರುಷದ ವಿದ್ಯಾರ್ಥಿಗಳೂ ಅನಂತನ ನೇಹಿಗರಾಗಿದ್ದಾರೆ. ಆನು ಪೂರ್ವಿಯಂತೆ ಸಂಘಸಂಸ್ಥೆಗಳ ಕಾರ್ಯದರ್ಶಿಪಟ್ಟ ಅನಂತನಿಗೇ ಮೀಸಲಾಗಿತ್ತು. ವಾಡಿಕೆಯಂತೆ ರಜೆಯಲ್ಲಿ ರಚಿಸಿದ ಕವನ ಪುಸ್ತಿಕೆಯೊಂದನ್ನು

ಪ್ರಾಧ್ಯಾಪಕರಿಗೆ ಕೊಟ್ಟನು. ಅವನ ಶೈಲಿ ಭಾವಗಳಿಗೆ ಮನಸೋತ ಅಧ್ಯಾಪಕರು ತಮ್ಮ ಗೆಳೆಯರೊಬ್ಬರ ಪತ್ರಿಕೆಯಲ್ಲಿ ಪ್ರಕಟಿಸಲು ಕೆಲವು ಕವನಗಳನ್ನು ಕಳಿಸಿದರು. ಮರುದಿನವೇ 'ತಂಗಿ' ಎಂಬ ಕವನ ಎಲ್ಲರ ಬಾಯಲ್ಲಿಯೂ ನುಡಿಯಹತ್ತಿತು. ಸಾಧನಕೇರಿಯ ಅಡವಿಯಲ್ಲಿ ಕಾಣಿಸಿಕೊಂಡು ಪರೀಕ್ಷೆಯನಂತರ ಅಭಿನಂದನೆ ನೀಡಿದ ವ್ಯಕ್ತಿಯೇ ಆ ತಂಗಿ ಕವನದ ವಸ್ತುವಾಗಿತ್ತು. ಅನಂತನಿಗೆ ದ್ವೇಷಕರು ಅನೇಕರಿರದಿದ್ದರೂ ಉತ್ಕರ್ಷೆಯನ್ನು ಮನವಾರೆ ಹೊಗಳದವರು ಅನಂತ ಇದ್ದರು.

* * * *

ಸಂಜೆ ಆರು ಘಂಟೆ. ನಗರಭವನ ಕಿಕ್ಕಿರಿದು ತುಂಬಿದೆ. ಕಾರುಗಳು ಸರ ಸರ ಬಂದು ನಿಂತಿವೆ. ಸ್ನೋ ಪಾವಡರ ವಾಸನೆ ಬೀರುತ್ತ ಹೆಣ್ಣೂ ಗಂಡೂ ಗುಂಪುಗುಂಪಾಗಿ ಬರಹತ್ತಿದ್ದಾರೆ. ಅನಂತನಿಗೆ ಕಾರಣ ಕಾಣಲಿಲ್ಲ. ಒಬ್ಬ ಹುಡುಗಿಯ ಗೌರವಾರ್ಥವಾಗಿ ಇಂದು ಇಲ್ಲಿ ಸಭೆ ಎಂದು ಯಾರೋ ನುಡಿದರು. "ಒಂದು ಹುಡುಗಿಯ ಸನ್ಮಾನಕ್ಕಾಗಿ ಇಷ್ಟೆಲ್ಲ ಆಡಂಬರವೇಕೆ?" ಎಂದು ಗೆಳೆಯರನ್ನು ಕೇಳಿದನು. ಮಾತು ನಡೆದಾಗಲೇ ಮಾರಿಸ್ ಕಾರೊಂದು ಬಂದು ನಿಂತಿತು. ಕೂಡಲೇ ಕಾರಿನಿಂದೊಬ್ಬ ಹುಡಿಗಿ ಇಳಿದಳು. ಹಳದಿ ಶಿಲ್ಕಿನ ವೇಷದಿಂದ ಅಧಿಕವಾದ ಅವಳ ಅಂಗಕಾಂತಿ ಬಹುಜನರನ್ನು ತನ್ನ ಕಡೆ ನೋಡುವಂತೆ ಮಾಡಿತು. ಅವಳ ಮುಖದ ಮೇಲೆ ತೇಲುವ ಜ್ಞಾನ ತೇಜಸ್ಸು ಹೃದಯದಲ್ಲೆಲ್ಲ ಸೂಸುವ ಸಿರಿವಂತಿಕೆಯ ಸೊಬಗಿನೊಡನೆ ಸಮ್ಮಿಲನವಾಗಿ ತೋರುವಾಗ ಯೌವನ ಕಣ್ಣು ನೋಡಿ ತಣಿಯದೇ ಯೋಗಿ ಕಣ್ಣಾದೀತು? "ಇವಳೇ ವಿಮಲಾ" ಎಂದಾಗ ಅನಂತ 'ಹಾಂ' ಎಂದನು. ತನ್ನ ಕವನದಲ್ಲಿ ಕಾಣಿಸಿಕೊಂಡ ತಂಗಿ ಇವಳೇ ಎಂದು ತಿಳಿದಾಗ ಅನಂತನ ಆನಂದ ದಿಕ್ಕುಗಾಣದಾಯಿತು. ಕೂಡಲೇ ಕಾರ್ಯದರ್ಶಿ ಬಂದು "ಮಿಸ್ಟರ್, ಸ್ವಾಗತಗೀತೆ ಅನ್ನುವವರು ಇನ್ನೂ ಬಂದಿಲ್ಲ. ತಾವು ದಯಮಾಡಿ ಅಂದರೆ ಉಪಕಾರ ಮಾಡಿದ ಹಾಗಾಗುತ್ತದೆ. ದಯಮಾಡಿ ಅನ್ನಿರಿ" ಎಂದು ಅನಂತನನ್ನು ಕಾಡಿಸಹತ್ತಿದನು. ಗೆಳೆಯರೂ ಒತ್ತಾಯಪಡಿಸಿದರು. ಅನಂತ ಅನಿವಾರ್ಯವಾಗಿ "ಹೂಂ" ಎಂದ.

ಮೊದಲಿನ ಸಾಲು ಅಧಿಕಾರಿಗಳಿಗೂ ಸಿರಿವಂತರಿಗೂ ಮೀಸಲಾಗಿತ್ತು.

ಎಡಭಾಗ ಸ್ತ್ರೀಯರಿಗಾಗಿ ಪ್ರತ್ಯೇಕವಿದ್ದರೂ, ಬಲಭಾಗದಲ್ಲಿ ಪುರುಷರ ಹೆಗಲಿಗೆ ಹೆಗಲು ಹಚ್ಚಿ ಕುಳಿತ ಸ್ತ್ರೀಯರ ದೃಶ್ಯ ಮನಮೋಹಕವಾಗಿತ್ತು. ಉಳಿದವರೆಲ್ಲರಿಗೂ ಗುಡಾರ ಜಮಖಾನೆಗಳ ವ್ಯವಸ್ಥೆ ಮಾಡಲಾಗಿತ್ತು. "ಈ ಸಮಾರಂಭವು ನ್ಯಾಯಾಧೀಶ ಕರಂದೀಕರರಿಗೆ ವರ್ಗವಾಗಿದ್ದರಿಂದ ಅವರಿಗೆ ಬೀಳ್ಕೊಡುವದಕ್ಕಾಗಿಯೂ, ಅವರ ಮಗಳಾದ ಶ್ರೀಮತಿ ವಿಮಲಾಬಾಯಿ ಇಂಟರ ಸಾಯನ್ಸದಲ್ಲಿ ಇಡಿ ವಿಶ್ವವಿದ್ಯಾಲಯಕ್ಕೆ ಪ್ರಥಮರಾಗಿ ಬಂದದ್ದಕ್ಕೆ ಅವರನ್ನು ಗೌರವಿಸುವದಕ್ಕಾಗಿಯೂ ಕೂಡಿದೆ" ಎಂದು ಸ್ವಾಗತ ಸಮಿತಿಯ ಕಾರ್ಯದರ್ಶಿ ಸಾರಿದಾಗ ಅನಂತನಿಗೆ ಎಲ್ಲವೂ ತಿಳಿಯಿತು.

'ಹೂಂ' ಅಂದ ಅಪರಾಧಕ್ಕಾಗಿ ಅನಂತ ಸ್ವಾಗತಗೀತೆ ಆರಂಭಿಸಿದನು. ಕೇದಾರ ರಾಗದಲ್ಲಿ ಅನಂತ ಆಲಾಪ ಗಿರಡಿಗಳೊಂದಿಗೆ ಶಾಸ್ತ್ರೋಕ್ತವಾಗಿಯೇ ಅಂದನು. ಧಾರವಾಡದಲ್ಲಿ ಅನಂತ ಮೊದಲನೇ ಸಾರೆ ಹಾಡಿದರೂ, ಅವನ ಕೋಮಲ ಕಂಠ ಬಹುಜನರನ್ನು ಮುಗ್ಧರನ್ನಾಗಿ ಮಾಡಿತು. ಹೀಗೆ ಮುಗ್ಧರಾದವರಲ್ಲಿ ಆ ವೃದ್ಧ ನ್ಯಾಯಪತಿ ಹಾಗೂ ಅವರ ಕುವರಿಯು ಇದ್ದರು. ತಾವು ಎಲ್ಲಿಯೋ ಮುನಸೀಪರಿದ್ದಾಗ ಈ ಹುಡುಗನ ಇದೇ ಮಾದರಿಯ ಹಾಡನ್ನು ಕೇಳಿದ್ದಾಗಿ ಮಗಳಿಗೆ ನ್ಯಾಯಪತಿ ಹೇಳಿದರು. "ಹಾವೇರಿಯ ನನ್ನ ಶಾಲೆಯಲ್ಲಿ" ಎಂದು ಮಗ್ಗುಲಲ್ಲಿಯೇ ಕೂತ ಮಗಳು ಉತ್ತರ ಕೊಟ್ಟಳು.

ಉದ್ದುದ್ದ ಭಾಷಣಗಳ ಮಳೆನಿಂತು, ಹಾರ ತುರಾಯಿಗಳ ತೂರಾಟವೂ ಮುಗಿಯಿತು. ಅಭಿನಂದನೆ ಆಭಾರ ಮನ್ನಣೆಗಳು ಯಥೋಚಿತ ಸಾಂಗವಾದವು. ಚಹಾ ತುಂಬಿದ ಕಿಟ್ಲಿ, ಬಿಸ್ಕೀಟ ಬಂಡಲುಗಳು ಬಂದವು. "ಆ ಹುಡುಗನನ್ನು ಕರೆಯಿರಿ" ಎಂದು ಜಡ್ಜರು ಆರ್ಡರು ಹೊರಡಿಸಿದರು. ಆಗಲೇ ಅನಂತ ದೂರ ಹೋಗಿದ್ದರಿಂದ "ಇಲ್ಲ ಸಾಬ" ಎಂಬ ಜವಾಬು ಬಂದಿತು. "ನನಗಂತೂ ಅವರ ಗೌರವಾರ್ಥ ಇಂದಿನ ಸಭೆಯಲ್ಲಿ ನಾಲ್ಕು ಮಾತು ಆಡಿದ್ದರೆ ಒಳಿತಾಗುತ್ತಿತ್ತು" ಎಂದು ವಿಮಲಾ ನುಡಿದಳು. "ಹೌದು ಎಫ್. ವಾಯ್.ದಲ್ಲಿ ಮೊದಲನೇ ಸ್ಥಾನ ಪಡೆದಿದ್ದಾನಂತೆ, ಕಥೆ-ಕವನಗಳನ್ನೂ ಬರೆದಿದ್ದಾನಂತೆ, ಮೇಲೆ ಸಂಗೀತವನ್ನೂ ಕಲಿತುಕೊಂಡಿದ್ದಾನಂತೆ", ಎಂದು ನ್ಯಾಯಪತಿಗಳು ಮಗಳಿಗುತ್ತರವಾಗಿ ಅನಂತನನ್ನು ಹೊಗಳಿದರು. "ಎಸ್ ಎಸ್, ಹೌದು, ಹೌದ್ರಿ" ಎಂದು ಕುಳಿತ ಕೆಲವರು ಕೌಲೆತ್ತಿನಂತೆ ತಲೆಹಾಕಿದರು.

ಶೀಲ-ಚಾರಿತ್ರ್ಯದಿಂದೊಡಗೂಡಿದ ಬಡವನ ಹಿರಿಮೆಯುತನ್ನು ಅರಿಯಲು ಇಂದಿನ ಸಮಾಜಕ್ಕೆ ಇನ್ನೂ ನೂರು ವರ್ಷ ಬೇಕೆಂಬುದನ್ನು ಪಾಪ! ಅವರೇನು ಬಲ್ಲರು? "ವಿಮಾ ನಿನ್ನ ಸಾಲ್ಯಾಗ ಇದ್ದಿದ್ರಲ್ಲ ಇವರು ಹಾವೇರ್‍ಯಾಗ. ಮತ್ತ ಅವತ್ತ ಸಾಧನಕೇರ್‍ಯಾಗ ರಾತ್ರಿ ಭೆಟ್ಟಿಯಾಗಿದ್ದಿಲ್ಲ?" ಎಂದು ಜಡ್ಜರು ಆಶ್ಚರ್ಯದಿಂದ ಕೇಳಿದರು. "ಹೌದು ಕೋಲಳ್ಳಿಯಿಂದ ಹಾವೇರಿಹಾಯ ಸ್ಕೂಲಿಗೆ ಒಬ್ಬ ಹುಡುಗ ಬರತಿದ್ದನಲ್ಲ, ಅವನೇ ಇವನು" ಎಂದು ಮಗಳು ಅಂದಳು. ಸಾಹೇಬರಿಗೆ ಸಖೇದಾಶ್ಚರ್ಯವಾಯಿತು.

ಸಿಗರೇಟಿನ ಹೊಗೆ ಬಿಡುತ್ತ ಒಬ್ಬೊಬ್ಬರೇ ಅಟ್ಟದಿಂದ ಇಳಿಯಹತ್ತಿದರು. ಕಾರುಗಳು ಭರ್‌ಭರ್ ಎನ್ನುತ್ತ ಒಂದರ ಹಿಂದೊಂದು ಓಡಹತ್ತಿದವು. ಜಿಲ್ಲಾ ಜಡ್ಜರ ಕಾರು ಹತ್ತು ನಿಮಿಷ ಓಡಿರಲಿಕ್ಕಿಲ್ಲ ಒಮ್ಮೆಲೆ ಗಕ್ ಎಂದು ನಿಂತಿತು. ತಂದೆ-ಮಗಳಿಬ್ಬರೂ ಕೆಳಗಿಳಿದು ನಡೆಯುತ್ತ ಹೊರಟಿರುವ ಅನಂತನನ್ನು ತಡೆದರು. ಅನಂತನ ಸುಖ-ದುಃಖಗಳನ್ನು ಕೇಳಿದರು. ಅನಂತನ ಉತ್ಕರ್ಷಗಾಗಿ ಉಲ್ಲಸಿತರಾಗಿ ನೂರು ರೂಪಾಯಿ ಕೊಡಲು ಹೋದರು. "ಸದ್ಯ ಒಲ್ಲೆ ಅವಶ್ಯವೆನಿಸಿದಲ್ಲಿ ಓಲೆ ಬರೆಯುವೆ"ನೆಂದು ಅನಂತ ವಿನೀತನಾಗಿ ಹೇಳಿದನು. ಕಾರಿನಲ್ಲಿ ಕೂಡ್ರಲು ಒತ್ತಾಯ ಪಡಿಸಿದರು. ಆದರೆ ನಿಷ್ಫಲರಾಗಿ ಕಾರು ಓಡಿಸಿದರು. ಅನಂತವೇಗದಿಂದ ಕಾರು ಓಡಿತು. ಆದರೆ ಅನಂತನ ಮನದ ವೇಗ ಕಾರಿನ ವೇಗವನ್ನು ಮೀರಿಸಿತ್ತು.

ದಿನದ ಬಹುಭಾಗವನ್ನು ಅಭ್ಯಾಸಕ್ಕಾಗಿಯೇ ಮೀಸಲಾಗಿಟ್ಟಿದ್ದಾನೆ. ಅಭ್ಯಾಸ ಬೆಳೆದಂತೆ ಕೈಯಲ್ಲಿಯ ಹಣವೂ ಕರಗಹತ್ತಿದೆ. ಸುಗ್ಗಿ ಸಂದು ಬಹು ದಿನಗಳಾಗಿದ್ದಾರಿಂದಲೂ, ತಾಯಿಯ ಜಡ್ಡಿಗಾಗಿ ಹೇರಳ ಹಣವನ್ನು ಡಾಕ್ಟರರಿಗೆ ಕೊಟ್ಟಿದ್ದರಿಂದಲೂ ಊರಿಂದ ಬರುವಷ್ಟು ಹಣವೂ ಬರದಂತಾಯಿತು. ದುಡ್ಡಿನ ಅಡಚಣಿ ಅಧಿಕವಾಯಿತು. ಗೆಳೆಯರ ಬಲುಮೆಯಿಂದ ಆರಂಭವಾದ ಧೂಮ್ರಪಾನವು ಚಟವಾಯಿತು. ಬಿಳಿಬತ್ತಿ ತರಲು ಹಣದ ಅಭಾವ ಅಡ್ಡಿಯಾಗಹತ್ತಿತು.

ಊಟದ ನೆವ ತೀರಿಸಿ ಕಾಲೇಜಕ್ಕೆ ಹೋದನು. ಮೂರು ದಿನಗಳೊಳಗಾಗಿಯೇ 'ಫೀ' ಕಟ್ಟಬೇಕೆಂಬ ಸುಗ್ರೀವಾಜ್ಞೆ ನೋಟೀಸಬೋರ್ಡಿನ ಮೇಲೆ ನಿಂತಿತ್ತು. ಗೆಳೆಯರಿಂದ ಕೈಗಡ ತರಬೇಕಂದರೆ ಹಿಂದಿನ ಸಾಲವೇ

ಗುಡ್ಡದಂತೆ ನಿಂತಿತ್ತು. ಆದರೂ ಜೀವ ಕೈಯಲ್ಲಿ ಹಿಡಿದುಕೊಂಡು ಸಿರಿವಂತ ಗೆಳೆಯನೊಬ್ಬನಿಗೆ ಮೊರೆ ಹೋದನು. ಯಾವದೋ ಶಕ್ತಿ ಅವನನ್ನು 'ಹೂಂ' ಎನಿಸಿತು. ಕ್ಲಾಸು ಮುಗಿಸಿ ಖೋಲಿಗೆ ಬಂದನು.

ಅಲ್ಲಿಯೂ ಅನಂತನ ದುರ್ದೈವ ಆ ಎಂದು ನಿಂತಿತ್ತು. ಬಾಕಿ ನಿಂತ ಎರಡು ತಿಂಗಳ ಬಾಡಿಗೆಗಾಗಿ ಮಾಲಿಕರಿಂದ ಒತ್ತಾಯವೂ ಅಂದೇ ಬಂದಿತು. ಜೀವವಿದ್ದರೂ ನಿರ್ಜೀವವಾಗಿ ಕ್ಷಣಹೊತ್ತು ತಲೆಹಿಡಿದುಕೊಂಡು ಕೂತನು. ಒಮ್ಮೆಲೇ ಎದ್ದು ಹೊರನಡೆದನು.

ನೇರವಾಗಿ ಅನಂತ ಅಧ್ಯಾಪಕರನ್ನು ಭೆಟ್ಟಿಯಾಗಿ ತನ್ನ ಜೀವನ ಚಿತ್ರವನ್ನೆಲ್ಲ ವರ್ಣಿಸಿದನು. ಹೊಟ್ಟೆಯೊಳಗಿನದೆಲ್ಲವನ್ನೂ ತೋಡಿಕೊಂಡನು. ಅನಂತನನ್ನು ಸಾಂತ್ವನಗೊಳಿಸುತ್ತ ಪ್ರೊಫೆಸರರು "ಅನಂತಾ, ಮನುಷ್ಯನ ಎಲ್ಲಾ ದಿನಗಳು ಒಂದೇ ಇರಲಾರವು. ಏಳು ಬೀಳುಗಳು ಬಾಳುವೆಯ ಒಡಕುಗಳು. ನಡೆಯುವ ದಾರಿಯಲ್ಲಿ ಅಡೆತಡೆಗಳು ಅನೇಕ, ಎಡವುವವರನ್ನು ನೋಡಿ ನಗುವದು ಲೋಕರೂಢಿ. ಬಿದ್ದವರನ್ನು ತುಳಿಯುವದು ಸಮಾಜ ನಿಯಮ. ನಿನ್ನ ಈ ಪರಿತಾಪ ನಿನ್ನ ಅಭ್ಯುದಯಕ್ಕೇ ಇರುತ್ತದೆ. ಹೆದರಬೇಡ" ಎಂದು ಉಪದೇಶ ಮಾಡಿ ಅನಂತನ ಕರುಣಾಜನಕ ಸ್ಥಿತಿಗಾಗಿ ಕನಿಕರಪಟ್ಟರು. ಅನಂತನ ಎಲ್ಲ ಕಥೆಯನ್ನು ಸಾದ್ಯಂತವಾಗಿ ಕೇಳಿದ್ದರಿಂದ ಕಾಣದ ಹಾಗೆ ಅನಂತನ ಜೇಬಿನಲ್ಲಿ ಹತ್ತು ರೂಪಾಯಿಯ ನೋಟೊಂದನ್ನು ಹಾಕಿದರು. ಅಪ್ಪಣೆ ಪಡೆದು ಅನಂತ ಖೋಲಿಗೆ ತಿರುಗಿದನು.

ಖೋಲಿಗೆ ಬಂದಾಗ ಗಡಿಯಾರ ಆಗಲೆ ಎಂಟು ಬಡಕೊಂಡಿತ್ತು. "ಅಂದು ನೂರುರೂಪಾಯಿ ತೆಗೆದುಕೊಂಡಿದ್ದರೆ ಹಿತವಾಗುತ್ತಿದ್ದಿಲ್ಲವೆ?" ಎಂದು ಮನದಲ್ಲಿಯೇ ವಿಚಾರಿಸಿದನು. ಆದರೆ "ಛೇ ತ್ಯಜಿಸಿದ್ದೇ ಹಿತವು" ಎಂದು ಒಳಗಿನ ಇನ್ನೊಂದು ಧನಿ ತಾನೇ ಉತ್ತರಕೊಟ್ಟಿತು. ಈ ವಿಚಾರಾಂದೋಲನದಲ್ಲಿ ಮಲಗಿರುವಾಗಲೇ ದೃಷ್ಟಿ ಕಿಡಕಿಯ ಮೇಲೆ ಬಿದ್ದಿದ್ದ ಎರಡು ಅಂಚೆ ಕಾಗದಗಳ ಮೇಲೆ ಓಡಿತು.

"ನಿಮ್ಮ ಬಗ್ಗೆ ನಿಮ್ಮ ಗೆಳೆಯರು ನನ್ನ ತಂದೆಯವರಿಗೆ ಅಲ್ಲದ ಸಲ್ಲದ ಪತ್ರ ಬರೆಯಹತ್ತಿದ್ದಾರೆ. ಜತನವಾಗಿರ್ರಿ. ಆದರೆ ಏನೂ ಭಾವಿಸದೆ ಮೊದಲಿ

ನಂತೆಯೇ ಬರೆದ ಕಥೆ-ಕವನ ಕಳಿಸಿರಿ. ಸಾಧ್ಯವಾದಲ್ಲಿ ಇಲ್ಲಿ ಒಮ್ಮೆ ಬನ್ನಿರಿ. ತಂದೆಯವರು ನಿಮ್ಮನ್ನು ನೆನೆಸುತ್ತಾರೆ. ಏನಾದರೂ ಬೇಕಾದರೆ ತಿಳಿಸಿರಿ" ಎಂಬದು ವಿಮಲಾನ ಪುಣೆ ಪತ್ರದ ಪೂರ್ತಿ ಪಾಠವಾಗಿದ್ದರೆ "ಲಚ್ಚವ್ವನ ಪ್ರಕೃತಿ ಕಠಿಣವಿದೆ. ನಿನ್ನನ್ನು ಬಹಳ ನೆನೆಸುತ್ತಾಳೆ. ನಾನು ಔಷಧ ಕೊಡಿಸಿದ್ದೇನೆ. ಬೇಗ ಬಾ" ಎಂಬುದು ಕೋಲಲ್ಳಿ ಕಾಗದದ ಮೂಲಾಂಶವಾಗಿತ್ತು. ಎಡವಿದ ಬೆರಳೇ ಮತ್ತೆ ಎಡವುವದು ಲೋಕಾನುಭವದ ಮಾತಷ್ಟೆ? ವಿಚಾರಿಸುತ್ತಲೇ ಮಲಗಿದನು.

ಮುಂಜಾವಿನ ವಿಧಿಗಳೆಲ್ಲ ಮುಗಿದ ನಂತರ ಬರೆದಿಟ್ಟಿದ್ದ ಲೇಖನಗಳನ್ನು ಕಾಲೇಜ ಮ್ಯಾಗಝಿನ್ನಿಗೆ ಕಳಿಸಿದನು. ಊರಿಗೆ ಹೋಗಲು ನಿಲ್ದಾಣಕ್ಕೆ ನಡೆದನು. ಟ್ರೇನು ತಡವಿದ್ದದ್ದರಿಂದ ಹುಚ್ಚನಂತೆ ಅಲ್ಲಲ್ಲಿ ತಿರುಗಾಡಿ ಬುಕ್‌ಸ್ಟಾಲಿಗೆ ಬಂದು ನಿಂತನು. ಪುಸ್ತಕ ಕೊಳ್ಳಬೇಕೆಂದು ಮನ ಹಾತೊರೆಯಿತು. ಆದರೆ ಪಾಕೀಟು ಬೇಡ ಎಂದಿತು. ಬಿಳಿಬತ್ತಿ ಹೊತ್ತಿಸಬೇಕೆಂದು ಜೇಬಿಗೆ ಕೈಹಾಕಿದಾಗ, ಹತ್ತುರೂಪಾಯಿ ನೋಟೊಂದು ಕಾಣಿಸಿಕೊಂಡಿತು. ಆಶ್ಚರ್ಯ ಆನಂದಗಳು ಮೂಡಿದವು. ಕೊನೆಗೆ ಪ್ರೊಫೆಸರರೇ ಹಾಕಿರಬೇಕೆಂಬ ಸಿದ್ಧಾಂತದಿಂದ ಮನ ಅಧ್ಯಾಪಕರ ಔದಾರ್ಯಕ್ಕಾಗಿ ಮಣಿಯಿತು. "ರಾಯರಃ ಯಾವ ಪುಸ್ತಕ ಬೇಕ್ರಿ" ಎಂದು ಪುಸ್ತಕದ ಅಂಗಡಿಯವ ಕೇಳಿದಾಗ, "ಯಾವುದಾದರೂ ಒಳ್ಳೆ ಪುಸ್ತಕ ಕೊಡಿರೆಂದು" ಅನಂತ ಅಂದನು. ಗಾಡಿಯು ಕೂಗು ಕರೆಯಿತು. "ಇಕೊ ತಕ್ಕೊಳ್ರಿ" ಎಂದು "ಮದರ" ಎಂಬ ಮ್ಯಾಕ್ಸಿಂ ಗಾರ್ಕಿಯ ಪುಸ್ತಕ ಕೊಟ್ಟನು ಸ್ಟಾಲಕೀಪರ. ಬೆಲೆಕೊಟ್ಟು ನಿಂತ ಗಾಡಿ ಹತ್ತಿ ಕುಳಿತನು ಅನಂತ. ಗಾಡಿ ಮರುನಿಮಿಷದಲ್ಲಿ ಓಡಹತ್ತಿತು. ಗಾಡಿಯಲ್ಲಿರುವವರೊಬ್ಬರು ಮಾತಿಗೆ ಮಾತು ಕಲೆತು ಲಚ್ಚವ್ವನ ಆಪ್ತಬಾಂಧವರೆಂದು ಅನಂತನಿಗೆ ತಿಳಿಯಿತು. ತನ್ನೂರು ಹಾವೇರಿ ಬಂದಾಗ ಅನಂತ ಇಳಿದನು. "ಲಚ್ಚವ್ವಗ ನಮ್ಮ ಹಕೀಕತ್ತು ಹೇಳಪ್ಪಾ" ಎಂಬ ಶಬ್ದಗಳು ಗಾಡಿಯಿಂದ ಹೊರಬಂದವು. ಅನಂತ 'ಹೂಂ' ಎನ್ನುವ ಮೊದಲೇ ಗಾಡಿಯು ಓಟ ಪ್ರಾರಂಭಿಸಿತ್ತು.

ದಾರಿಯಲ್ಲಿ 'ಗೂ ಗೂ' ಎಂದು ಗೂಗಿ ಕೂಗಿತು. ಅನಂತನ ಆತ್ಮ ನೊಂದಿತು. ನಾಲ್ಕು ಹೆಜ್ಜೆ ಮುಂದೆ ಹೋಗಲು ಊರ ಜಾತ್ರೆಯ ಮೆರವಣಿಗೆ

ಯೊಂದು ಎದುರು ಬಂದಿತು. ಭಾವಿಕ ಅನಂತ ಇದು ಶುಭ ಸೂಚಕ ಎಂದು ಅನ್ನುತ್ತ ನೇರವಾಗಿ ಲಚ್ಚಮ್ಮನ ಮನೆಗೆ ನಡೆದನು.

*　　　*　　　*　　　*

ಲಚ್ಚಮ್ಮನ ಪ್ರವಾಸ ಆಗಲೇ ಮುಗಿದು ಹೋಗಿತ್ತು. ಅನಂತನ ಪಯಣ ಒಂದು ಊರಿಂದ ಇನ್ನೊಂದು ಊರಿಗಿದ್ದರೆ, ಲಚ್ಚಮ್ಮನ ಪ್ರವಾಸ ಒಂದು ಜಗದಿಂದ ಮತ್ತೊಂದು ಜಗಕ್ಕಿತ್ತು. ಅನಂತ ಬಿಗಿದ ಕಂಠದಿಂದ ಗದ್ಗದನಾದನು. ಗೂಗಿ ಪುನಃ ಕೂಗಿತು. "ಇನ್ನೇಕೆ ಕೂಗುವಿ ನಿನ್ನ ಮಾತೇ ಸತ್ಯವಾಯಿತಲ್ಲ" ಎಂದು ಅನಂತನ ಒಳದನಿ ವ್ಯಾಕುಲತೆ ಯಿಂದ ಉತ್ತರಕೊಟ್ಟಿತು.

ಮಲ್ಲನ ದಾರಿದೀಪವೇ ನಂದಿ ಹೋಗಿದ್ದರಿಂದ ಜಗವೆಲ್ಲ ತನ್ನದಲ್ಲ ವೆಂಬಂತೆ ತೋರಿತು. ಮಲ್ಲನನ್ನು ಸಾಂತ್ವನಗೊಳಿಸುವದು ಅನಂತನಿಗೆ ದೊಡ್ಡ ಕೆಲಸವೇ ಆಯ್ತು. ಕೆಲವೊಂದು ಜನ ಲಚ್ಚಮ್ಮನಿಗೆ ಮರುಗಿತು. ವಿಶಿಷ್ಟ ಜನಾಂಗ ಅವಳ ಮರಣ ಸುಖಾಂತಕ್ಕಾಗಿಯೇ ಎಂದು ಭವಿಷ್ಯ ನುಡಿ ದರು. ಆದರೆ ನಡೆಯುವದೆಲ್ಲ ನಡದೇ ಹೋಗಿತ್ತು.

ಮನೆಗೆ ಬಂದು ತಂದೆಯವರೊಂದಿಗೆ ವಿಚಾರಿಸಿ ಮಲ್ಲನ ಮಾವನೂ ರಿಗೆ ಓಲೆ ಬರೆಸಿದನು. ಮಲ್ಲನ ಮದುವೆಗೆ ಬರಬೇಕೆಂದು ಬಹುದಿನಗಳಿಂದಲೂ ಬಾರದಿದ್ದ ಬಂಧುಗಳು ಬಂದು ಮಲ್ಲನನ್ನು ಕರೆದುಕೊಂಡು ಹೋದರು. ಇಲ್ಲಿಯ ವರೆಗೆ ಕೋಲಳ್ಳಿಯನ್ನು ತನ್ನದೆಂದು ಭಾವಿಸಿದ್ದ ಮಲ್ಲನನ್ನು ಇಂದು ಕೋಲಳ್ಳಿ ತನ್ನವನೆಂದುಕೊಳ್ಳಲಿಲ್ಲ.

ಕಮಲಾಬಾಯರ ಜತೆಯಾಗಿ ಉಳಿದಿದ್ದವುಗಳೆಂದರೆ ಲಚ್ಚಮ್ಮನ ಆದರ್ಶ, ಅನುಸಂಧಾನಗಳು.

ತಾನೇ ಆರಂಭಿಸಿದ್ದ ರೈತ ಸಂಘಕ್ಕೆ ಅನಂತ ಮರುದಿನ ಹೋಗಿಬಂದನು.

ಪರೀಕ್ಷೆ ಸಮೀಪಿಸಿದ್ದರಿಂದ ಆ ದಿನವೇ ಧಾರವಾಡಕ್ಕೆ ಹೊರಟನು.

*　　　*　　　*　　　*

ಅನಂತವಾದ ವಿಶ್ವದಲ್ಲಿ ಲಚ್ಚಮ್ಮನೊಬ್ಬಳ ಅಗಲುವಿಕೆಯಿಂದ ಆಗುವ ಸ್ಥಿತ್ಯಂತರವಾದರೂ ಏನು? ಧಾರವಾಡಕ್ಕೆ ಬಂದ ಅನಂತನ ಜೀವನ ಯಂತ್ರ-

ದಂತೆ ಸಾಗಹತ್ತಿತು. ಅಭ್ಯಾಸದ ಪ್ರವಾಹ ವೇಗದಿಂದ ನಡೆಯಹತ್ತಿತು.

ಗ್ರಂಥಮಾಲೆಯೊಂದರಿಂದ ಕಾದಂಬರಿ ಬರೆದು ಕಳಿಸಬೇಕೆಂಬ ಆಗ್ರಹದ ಪತ್ರ ಬಂದಿತ್ತು. ಆದರೆ ಸನಿಹದಲ್ಲಿಯೇ ಸನ್ನದ್ಧವಾಗಿದ್ದ ಪರೀಕ್ಷೆ ಅನಂತ ನನ್ನು ಕಾದಂಬರಿ ಬರೆಯುವದರಿಂದ ದೂರ ನಿಲ್ಲಿಸಿತು.

ಕೆಲ ದಿನಗಳು ಕಳೆಯುವ ಮೊದಲೇ ಬಯಸಿದ ಪರೀಕ್ಷೆಯು ಬಂದಿತು. ತಲೆಯೆತ್ತಿ ಸುತ್ತುವರಿದು ನಿಂತ ಅಡಚಣಿಗಳು ಅನಂತನಲ್ಲಿ ಅಧೈರ್ಯವನ್ನುಂಟು ಮಾಡಿದವು. ಅನಂತ ಚಿಂತಿತನಾದನು.

ಪರೀಕ್ಷೆ ಬಂತು ಬಂತು ಎನ್ನುವಾಗಲೇ ಮುಗಿದೂ ಹೋಯಿತು. ಆಗ ಬೇಕಾದಷ್ಟು ಪೇಪರುಗಳು ಚೆನ್ನಾಗಿ ಆಗಲಿಲ್ಲವೆಂಬದೂ ಅನಂತನಿಗೆ ತಿಳಿ ಯಿತು. 'ಪ್ರಯತ್ನ ನನ್ನದು ಫಲ ಅವನದು' ಎಂದು ದೈವದ ಮೇಲೆಯೇ ಭಾರ ಹಾಕಿದನು.

ಊರಿಗೆ ಹೋಗಬೇಕು ಎಂದು ದಿನವೂ ಕಾತರಿಸುತ್ತಿದ್ದನು. ಆದರೆ ಸಕ್ರಿಯ ಸಹಾಯ ಸೌಜನ್ಯತೆ ನೀಡಿದ ಗೆಳೆಯರ ಬಳಗ ಬೇಗ ಬೀಳ್ಕೊಡಲಿಲ್ಲ. ಕೊನೆಗೆ ಯಾವದೋ ನೆವಮಾಡಿ ಊರಿಗೆ ಹೋಗಲು ಸಿದ್ಧತೆ ನಡೆಸಿದನು. ಅನಿ ವಾರ್ಯವಾಗಿ ಗೆಳೆಯರು ಅಪ್ಪಣೆ ಕೊಟ್ಟರು.

ಮರುದಿನ ಕೋಲಳ್ಳಿಗೆ ಹೋಗಬೇಕೆಂದು ನಿಲ್ದಾಣಕ್ಕೆ ನಡೆದನು. ತಿಕೀಟು ತೆಗೆಯಲು ಗದ್ದಲದಲ್ಲಿ ಸೇರಿದನು. ಹಿಂದಿನಿಂದ ಬಂದ "ಅನಂತ" ಎಂಬ ಶಬ್ದ ಮುಂದು ಹೋಗುವ ಅನಂತನನ್ನು ತಡೆಯಿತು. ತಿರುಗಿ ನೋಡಿದಾಗ ವಿಮಲೆಯ ಭೌತಿಕದೇಹ ಎದುರು ನಿಂತಿತ್ತು. ಹಿತಚಿಂತನೆಯ ಮಾತುಗಳು ಮುಗಿದವು. "ಹೂಂ ಅನಂತರಾವ, ಇದು ಹಿಡೀರಿ ನಿಮ್ಮ ಪುಣೆಯ ತಿಕೀಟು. ಸಾಧ್ಯವಾದಲ್ಲಿ ತಂದೆಯವರು ನಿಮ್ಮನ್ನು ಕರೆದು ತರಲಿಕ್ಕೆ ಹೇಳಿ ದ್ದರು. ದಯಮಾಡಿ ಬರಲೇಬೇಕು" ಎಂಬ ಬಲುಮೆಯೊಡಗೂಡಿದ ಬಲುಮೆ ಮಾತು ಅನಂತನನ್ನು ಮೂಕನನ್ನಾಗಿ ಮಾಡಿತು. ಗಾಡಿಯ ಸಪ್ಪಳ ಮೌನ ವನ್ನು ಕದಲಿಸಿತು. ಯಾವದೊ ಶಕ್ತಿ ಕೈಹಿಡಿದು ಮೇಲೆ ಜಗ್ಗಿದಂತಾ ಯಿತು. ಅರಿಯದವನಂತೆ ಅನಂತ ಗಾಡಿ ಏರಿದನು. ಏನೂ ಅರಿಯದ ಗಾಡಿ ಓಡಹತ್ತಿತು.

ಮುಂದಿನ ಜಂಕ್ಶನ್ ನಿಲ್ದಾಣದಲ್ಲಿ ವಿಮಲಾ ಚಹಾ ತಂದು ಕೊಟ್ಟ ಮೇಲೆಯೇ ಎಚ್ಚರ ಬಂದದ್ದು ಅನಂತನಿಗೆ. ಇಬ್ಬರಲ್ಲಿಯೂ ಮೂಕವಾಗಿದ್ದ ಭಾವ ಇನ್ನೂ ಮೂಕವಾಗಿಯೇ ಇತ್ತು. ಮನಗಳಲ್ಲಿ ಮೂಡಿದ ವಿಚಾರ ಗಳೆಲ್ಲ ಹೃದಯಗಳಲ್ಲಿಯೇ ಹೆಪ್ಪುಗಟ್ಟಿ ನಿಂತವು. ಮನ ಒಂದಾಗುವಾಗ ನಾಲಿಗೆ ಮೂಕವಾಗುವದು ನಿಸರ್ಗ ಸಹಜ. ಮರುದಿನ ಮುಂಜಾನೆ ಅನಂತ ಗಾಡಿಯಲ್ಲಿ ಕಣ್ಣು ತೆರೆಯುತ್ತಾನೆ! ವಿಶಾಲವಾದ ಜನನಿಬಿಡ ನಿಲ್ದಾಣ ಕಂಡಿತು. ವಿಮಲೆಯ ಸಂಗಡ ತಾನೂ ಇಳಿದನು. ಎದುರಿನ ಬೋರ್ಡು ಪುಣೆ ಎಂದು ಹೇಳಿತು. ಅವರಿಗಾಗಿಯೇ ಕಾದಿದ್ದ ಕಾರಿನಲ್ಲಿ ಅನಂತ ವಿಮಲೆ ಯರು ಮನೆಗೆ ಹೋದರು.

೫

ಅನಂತನನ್ನು ನೋಡಿ ಕರಂದೀಕರರು " You have done a good thing Vima " ಎಂದರು. ಅನಂತನ ಮೈಮೇಲೆ ಕೈಯಾಡಿಸಿ ಸುಖ-ದುಃಖ ಕೇಳಿದರು. ನ್ಯಾಯಪತಿಗಳ ಆನಂದ ಚರಮಸೀಮೆ ಮುಟ್ಟಿತು. ಕರಂದೀಕರರ ಔದಾರ್ಯತೆಗಾಗಿ ಅನಂತ ಮನದಲ್ಲಿಯೇ ಹಿಗ್ಗಿದ.

ಕರಂದೀಕರರ ಮನೆ ಅಂದರೆ ಅರಸರ ಮನೆಯಂತೆಯೇ ಇತ್ತು. ಸಕಲ ಆಧುನಿಕ ಸಲಕರಣೆಗಳು ಅಲಂಕರಿಸಿದ್ದವು. ಅಮೃತಶಿಲೆಯಿಂದ ತುಂಬಿದ ಮನೆ-ನೆಲ, ಶುಭ್ರವಾಗಿ ಹೊಳೆಯುವ ಬಾಗಿಲ ಕರ್ಟನಗಳು ಬರುವ ಜನರ ಕಣ್ಣುಗಳನ್ನು ಕುಕ್ಕುತ್ತಿದ್ದವು. ಮನೆಯ ಮುಂದೆ ವಿಶಾಲವಾಗಿದ್ದ ಕೈ ದೋಟ, ಮಧ್ಯದಲ್ಲಿ ಮೂರ್ತಿಯ ಮುಖದಿಂದ ನೆಗೆಯುವ ನೀರಿನ ಕಾರಂಜಿ, ಅಲ್ಲಲ್ಲಿ ಕೂಡ್ರಲು ಸಿದ್ಧಮಾಡಿ ಹಾಕಿದ ಸಿಮೆಂಟ ಸೋಫಾಗಳು ಮನೆಗೆ ಬೆಡಗನ್ನು ಅಧಿಕವಾಗಿ ಕೊಡುತ್ತಿದ್ದವು.

ಜಡ್ಜ ಸಾಹೇಬರ ಸಾರಸರ್ವಸ್ವವೆಂದರೆ ಇದ್ದೊಬ್ಬ ಮಗಳಾದ ವಿಮಲೆ. ಹುಟ್ಟುವ ಮೊದಲೇ ತಾಯಿಯ ಪ್ರೀತಿಯನ್ನು ಕಳಕೊಂಡ ವಿಮಲೆಗೆ

ತಂದೆಯೇ ತಾಯಿಯ ರೂಪವಾಗಿದ್ದರು. ಮಗಳ ಮಹತ್ವಾಕಾಂಕ್ಷೆಗಳನ್ನು ಈಡೇರಿಸುವವರಲ್ಲಿ ಸಾಹೇಬರಿಗೆ ಸಂತಸ, ಸಂಭ್ರಮ. ಪುಣೆಯಲ್ಲಿ ಇರುವ ವರೆಗೂ ವಿಮಲೆಯೇ ಆನಂತನ ಅನುಯಾಯಿ.

ಅನಂತನ ನಡೆ–ನುಡಿ, ಆಚಾರ–ವಿಚಾರ ಕಾಕಾನನ್ನು ಆಕರ್ಷಿಸಿದವು. ಬುದ್ಧಿಮತ್ತೆ, ಪಾಂಡಿತ್ಯ–ಪ್ರತಿಭೆಗಳು ವಿಮಲಾನಲ್ಲಿ ಅನಂತನ ಬಗ್ಗೆ ಅಭಿಮಾನ ಹೆಚ್ಚಿಸಿದವು. ತಂದೆ-ಮಗಳ ಆತಿಥ್ಯ ಸಂಭ್ರಮದಲ್ಲಿ ಅನಂತ ಕೆಲಕಾಲ ಕೋಲಳ್ಳಿ ಮರೆತಿರಬಹುದು ?

ದಿನವೂ ವಿಮಲೆಯ ಸಂಗಡ ಅತ್ತಿತ್ತ ಕಾರಿನಲ್ಲಿ ತಿರುಗಾಡುವದೊಂದು ಅನಂತನ ಕೆಲಸವೇ ಆಯಿತು. ನವನಾಗರಿಕತೆಯ ನಡುನಾಡಾದ ಪುಣೆ ಪಟ್ಟಣದ ಸಿರಿ–ಸೊಬಗುಗಳು ಅನಂತನನ್ನು ಮುಗ್ಧನನ್ನಾಗಿ ಮಾಡಿದವು. ಆದರೆ ಅದೇ ಪಟ್ಟಣದಲ್ಲಿ ಬೆಡಗು–ಬಿನ್ನಾಣಗಳಿಂದ ಬೀದಿಯಲ್ಲಿ ಸ್ತ್ರೀ-ಪುರುಷ ಭೇದವಿಲ್ಲದೆ ಅಲೆದಾಡುತ್ತಿರುವ ಗಂಡುರಾಮಿಗಳ ಗುಂಪುಗಳು ಅನಂತನಲ್ಲಿ ಅಸಹ್ಯತೆಯನ್ನು ಹುಟ್ಟಿಸಿದವು. ತನ್ನ ತರ್ಕದ ತಕ್ಕಡಿಯಲ್ಲಿ ಪುಣೆ ಕೋಲಳ್ಳಿಗಳ ತುಲನೆ ನಡೆಸಿದನು. ಮಹಡಿಯ ಮೇಲೆ ಮಹಡಿಯನ್ನು ಕಟ್ಟಿಸಿ, ಬಡವರ ರಕ್ತಗಳಿಂದ ರಂಜಿತರಾದ ಸಿರಿವಂತರ ತಂಡ ಒಂದೆಡೆ ಕಾಣುತ್ತಿದ್ದರೆ, ಒಪ್ಪೊತ್ತೂಟವನ್ನೂ ಕಾಣದೇ ಹಿಡಿ ಕೂಳಿಗಾಗಿ ಮನೆಮನೆ ಅಂಡಲೆಯುವ ದರಿದ್ರರ ದೃಶ್ಯ ಇನ್ನೊಂದೆಡೆಯಲ್ಲಿ ಕಾಣಿಸುತ್ತಿತ್ತು ! ಇವೆಲ್ಲವುಗಳಿಂದ ಪರಿವರ್ತನವಾದ ಪುಣೆಯ ಜೀವನ ಅನಂತನಿಗೆ ಸ್ವಾಭಿಮಾನವೇದ್ಯವಾಯಿತು.

ಮೊದಲೇ ನಿಶ್ಚಯಿಸಿದಂತೆ ಶನಿವಾರ ಇತಿಹಾಸ ಪ್ರಸಿದ್ಧ "ಶನಿವಾರ ವಾಡೆ"ಯನ್ನು ನೋಡಲು ವಿಮಲೆ ಅನಂತರು ಹೋದರು. ಮುಂಜಾವಿನ ಸಮಯವಾದ್ದರಿಂದ ಬಿಸಿಲು ಇನ್ನೂ ಪ್ರಖರವಾಗಿರಲಿಲ್ಲ. ವಾತಾವರಣ ನಿರ್ಜನವಾಗಿತ್ತು. ಎಲ್ಲ ಹಳೆಯ ಹಿರಿತನ ಅಳಿಸಿ ಹೋಗಿದ್ದರೂ ಅಲ್ಲೊಂದು ಇಲ್ಲೊಂದು ಉಳಿದ ಕುರುಹುಗಳು ಗತಕಾಲದ ಗೌರವಯುಕ್ತವಾದ ಸಾಮ್ರಾಜ್ಯ ಸಾಹಿತ್ಯದ ದ್ಯೋತಕಗಳಾಗಿದ್ದವು.

ನೋಡು ನೋಡುತ್ತಲೇ "ಎಲ್ಲರ ಸ್ಥಿತಿಯೂ ಹೀಗೆ ಒಂದಿಲ್ಲ ಒಂದು ದಿನ ಆಗುವದು" ಎಂಬ ವಿಕಟ ನಗೆಯೊಂದು ಕೇಳಿಸಿದ ಹಾಗೆ ಆಯಿತು. ವಾಡೆಯ

ಒಡಲಿನಲ್ಲಿ ಮುಳುಗಿದ ಅನಂತ ಸಾಹಿತ್ಯ, ಸಂಸ್ಕೃತಿ, ಸಂಗೀತಗಳು ಮೇಲೆ ಮೂಡಿಬಂದವು. ಬಿಸಿಲೇರಿದ್ದರಿಂದ ಅನಂತ ವಿಮಲೆಯರು ಮನೆಗೆ ತಿರುಗಿದರು.

ಅಂದೇ ಸಂಜೆ ನಾಲ್ಕೂವರೆಗೆ ಪರ್ವತೀ ಬೆಟ್ಟದ ಸಿರಿ ನೋಡಲು ಅನಂತನ ಸವಾರಿ ಸಾಗಿತು. ದೂರದಿಂದಲೇ ಕಾಣುತ್ತಿರುವ ದೇವೀಮಂದಿರ ಮನದಲ್ಲಿ ಭಕ್ತಿಸೆಲೆಯನ್ನು ಹುಟ್ಟಿಸಿತು. ಮೆಟ್ಟಲುಗಳನ್ನೇರಿ ಮೇಲೆ ಹೋದಾಗ ಭಕ್ತಿಪ್ರವಾಹ ಮೈಯನ್ನೆಲ್ಲ ಆವರಿಸಿತು. ಶಿಲೆಯ ರೂಪದಲ್ಲಿಯ ದೇವಿಯನ್ನು ನೋಡಿ ಅನಂತ ಆನಂದ ಬಾಷ್ಪಗಳನ್ನು ಸುರಿಸಿ, ದೇವಿಯನ್ನು ಮನದಲ್ಲಿಯೇ ವರಪಹಸ್ತ ನೀಡೆಂದು ಬೇಡಿಕೊಂಡನು. ಅನಂತನ ಅಂತರಾಳದ ಆರ್ತನಾದಕ್ಕೆ 'ಓ' ಎಂದಂತೆ ದೇವಿಯ ಬಲಭಾಗದಿಂದ ಪುಷ್ಪ ಒಂದು ಕೆಳಗೆ ಬಿತ್ತು. ಇಷ್ಟಾರ್ಥ ಕೈಗೂಡುವದೆಂದು ಮನದಲ್ಲಿಯೇ ಹಿಗ್ಗಿದನು. ನಿಸರ್ಗ ಸೌಂದರ್ಯ ಅನಂತನನ್ನು ಕ್ಷಣಹೊತ್ತು ನಿಲ್ಲಿಸಿತು. ಹೊತ್ತು ಸಂದಿದ್ದರಿಂದ ಮನೆಗೆ ತಿರುಗಿದರು. ದಣಿದ ದೇಹ ನಿದ್ರೆಗಾಗಿ ಕಾತರಿಸಿತ್ತು.

ಮರುದಿನ ಫರ್ಗ್ಯೂಸನ್ ಕಾಲೇಜಿಗೆ ಅನಂತನ ಕಾರು ಓಡಿತು. ವಿದ್ವತ್‌ಪೂರ್ಣ ಪ್ರೊಫೆಸರರ ಧೀಮಂತತೆಯನ್ನು ಕೇಳಿ ಹರುಷಪುಲಕಿತನಾದನು. ಮರಾಠೀ ಜನರ ಕರ್ತವ್ಯಪರಿಪಾಲನೆ, ನಿಃಸ್ವಾರ್ಥತೆಯ ನಿಸ್ಸೀಮತೆ ಶಿಕ್ಷಣದ ಬಗ್ಗೆ ಇರುವ ಉತ್ಕಟ ಮಹತ್ವಾಕಾಂಕ್ಷೆಗಳ ಸಾಕ್ಷಿಯಾಗಿ ನಿಂತ ಶಿಕ್ಷಣ ಸಂಸ್ಥೆಗಳ ಇತಿಹಾಸ ಕೇಳಿ ಆನಂದಿಸಿದನು. ಕನ್ನಡ ನಾಡಿನಲ್ಲಿರುವ ವ್ಯಕ್ತಿವೈಷಮ್ಯ, ಜಾತೀಯ ಜಾಡ್ಯ, ಸ್ವಾರ್ಥಲೋಲುಪತೆಗೆ ಮರುಗಿದನು.

ಕಾರನ್ನು ವಿಮಲೆ ಮೊದಲೇ ಕಳಿಸಿಬಿಟ್ಟಿದ್ದಳು. ಅತ್ತಿತ್ತ ತಿರುಗಾಡಿ ಅನಂತನಿಗೆ ಎಲ್ಲವನ್ನೂ ವಿವರಿಸುತ್ತ ನಡೆದಳು. ಆದರೆ ಕಟ್ಟಿದ ಕೈಗಡಿಯಾರು ಆರು ಬಡಕೊಂಡು ಮನೆಗೆ ನಡೆಯಿರಿ ಎಂದಿತು.

ಕಾಲು ನಡಿಗೆಯಿಂದ ಮನೆಯ ಕಡೆ ಹೊರಟರು. ದಾರಿಯಲ್ಲಿ ಕಾಣುವವೆಲ್ಲವುಗಳನ್ನು ವಿಮಲೆ ಅನಂತನಿಗೆ ವಿವರಿಸುತ್ತ ನಡೆದಳು. ಅನಂತನ ಸಂಗಡ ನಡೆಯುವದೆಂದರೆ ವಿಮಲೆಗೆ ಅಪೂರ್ವ ಆನಂದ ಸವಿದಂತೆ. ಅರ್ಧದಾರಿ ನಡೆದಿರಬಹುದು, ವಿಮಲೆಯ ಮಾತುಗಳು ಬೇರೆ ದಾರಿ ಹಿಡಿದವು. ಅನಂತ

ನಿಗೆ ಸೋಜಿಗವೆನಿಸಿತು. ಮೊದಮೊದಲು ಕೊಂಚ ಗಾಬರಿಯೂ ಆದನು. ಆದರೆ ವೇಳೆ ಅವನನ್ನು ಗಟ್ಟಿಗನನ್ನಾಗಿ ಮಾಡಿತು. ಸುಶೀಲಳಿಗೆ ಅನುಗುಣ ವಾಗುವ ರೀತಿಯಲ್ಲಿ

"ನಿಮ್ಮ ಮದುವೆಯ ವಿಚಾರವೇನು ?" ಎಂದಳು ವಿಮಲೆ. ನಿರ್ವಿಕಾರ ಬುದ್ಧಿಯಿಂದ "ಏನೂ ವಿಚಾರವಿಲ್ಲ" ಎಂದು ಅನಂತ ಉತ್ತರಿಸಿದ.

"ಹಾಗಾದರೆ ಒಂಟಿಗರಾಗಿಯೇ ಇರುವಿರಾ ?" ಎಂದು ವಿಮಲೆ ಕೇಳಿದಳು.

"ಹೌದು ಜೀವನದಲ್ಲಿ ಮನುಷ್ಯ ಬಂದದ್ದು ಒಂಟಿಗನಾಗಿ, ಹೋಗು ವದು ಒಂಟಿಗನಾಗಿ, ಬದುಕಿ ಬಾಳುವದೂ ಒಂಟಿಗನಾಗಿಯೇ !"

"ಒಂಟಿಗರಾಗಿದ್ದವರಿಗೆ ಸಮಾಜವೇಕೆ ? ಒಬ್ಬನಾಗಿಯೇ ಬದುಕಿ ಬೆಳೆದು ಅಳಿಯುವದಕ್ಕಿಂತ ಸಮಾಜರಹಿತನಾಗಿ ಎಲ್ಲಿಯಾದರೂ ದೂರ ಇರಬಹುದಲ್ಲ. "

"ವಿಮಲಾ, ಅದೇ ನಿನ್ನ ತಪ್ಪು ಗ್ರಹಿಕೆ ! ನಾನು ಒಬ್ಬನಿದ್ದರೂ ನನ್ನ ಸಂಗಡ ಅನಂತಕಾಲವೂ ಇನ್ನೊಂದು ವ್ಯಕ್ತಿ ಶಕ್ತಿರೂಪದಲ್ಲಿದೆ. ಐವತ್ತೊಂದು ಅಕ್ಷರಗಳಲ್ಲಿಯೂ ಓಂಕಾರಪೂರಿತ ದೇವತ್ವ ಇದೆ. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಮೊದಲಾದ ಪಂಚಕೋಶ ಗಳಲ್ಲಿಯ ಪಂಚರೂಪಗಳೂ ನನ್ನ ಸಹಕಾರಿಗಳಾಗಿದ್ದಾರೆ. ನಿತ್ಯಾನಿತ್ಯ ಜಡ ದಲ್ಲಿ ಅಡಕವಾದ ಇಪ್ಪತ್ನಾಲ್ಕು ತತ್ವೇಶ್ವರರು ನನ್ನ ಹಿತಚಿಂತಕರಾಗಿದ್ದಾರೆ. ಅಂದ ಮೇಲೆ ನಾನು ಹೇಗೆ ಒಂಟಿಗನಾಗುವೆ ? ಉಳಿದ ಜನರ ದೃಷ್ಟಿಯಲ್ಲಿ ನಾನು ಒಂಟಿಗನೆನಿಸಬಹುದು. ಅವರ ದೃಷ್ಟಿಯಲ್ಲಿ ನಾನು ಕಾಣುವದನ್ನೇ ಹೇಳಿದೆ ವಿನಃ...."

"ಬಾಳಿಗೆ ಸಂಗಾತಿ ದೊರಕಿದಲ್ಲಿ ಅದು ವಿಕಸಿತವಾಗಿ ಅರಳಿ ಬಾಳುವ ವರೆಲ್ಲರಿಗೂ ಬದುಕಿನ ಅರ್ಥ ಹೇಳಬಹುದಲ್ಲ. ಬದುಕು ಬಾಳುವೆಯಿಂದಲ್ಲವೇ ಬೆಳೆಯುವದು ? ಜೀವ ಪೂರ್ಣತ್ವದೆಡೆಗೆ ಸಾಗುವದು ಸಂಗಾತಿ ದೊರೆತಾಗಲೇ ಅಲ್ಲವೇ ?"

"ವಿಮಲಾ, ನಿನ್ನ ಮಾತಿನಲ್ಲಿ ಅರೆ ಸತ್ಯವಿದೆ. ಜೀವನಕ್ಕೆ ಒಂದು ಮಟ್ಟವಿದೆ. ಅದು ದೊರಕಲು ಅನಂತ ದಾರಿಗಳಿವೆ. ಅದರಲ್ಲಿ ಮದುವೆ

ಯೊಂದು. ಇದರಿಂದ ಸಿಗುವದು ಪೂರ್ಣತ್ವವೆಂಬ ಕನಸಿನ ಛಾಯೆ. ಆದರೆ ಜೀವನ ಅನಂತತ್ವ ಪೂರ್ಣತ್ವ ಪಡೆಯಬೇಕಿದ್ದರೆ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ ಮೊದಲಾದ ಅಷ್ಟ ಯೋಗಗಳಿಂದ ಈಶನನ್ನು ಸೇವಿಸಿದಲ್ಲಿ ಬದುಕು ಬಂಗಾರವಾಗಿ, ಆತ್ಮ ಅಮರ ವಾಗಿ, ಹೃದಯ ಅವನ ಪಾದಕಮಲದಲ್ಲಿ ಸಮ್ಮಿಲನವಾಗುವದು. ಎಂದೂ ಕಲ್ಪಿಸದ ದೇವತಾನಂದ, ಸದಾನಂದ ದೊರೆಯುವದು."

ವಿಮಲೆಗೆ ಅನಂತನ ಮಾತಿನ ಸರಿಯಾದ ಅರ್ಥ ಆಗದಾಯಿತು. ಕೂಡಲೇ ಮಾತಿನ ಓಘ ಬದಲಿಸಿ " ನಿಮ್ಮ ಜೀವನದ ಕೊನೆಯ ಆಶೆ ಏನು? " ಎಂದಳು. " ಆಶೆಗೆ ಅಂತ-ಪಾರವಿಲ್ಲ. ದುಃಖದ ಮೂಲವೇ ಆಶೆಯ ಉಗಮ ದಲ್ಲಿ " ಎಂಬ ಬುದ್ಧನ ಮಾತು ಹೇಳಿದನು.

" ಆಶೆ ಇಲ್ಲದ ಜೀವ ಗುರಿ ಇಲ್ಲದ ನೌಕೆ ಅಲ್ಲವೆ ? "

" ಹೌದು, ನೌಕೆ ನಡೆಸುವವನಿಗೆ ಯಾವಾಗಲೂ ಗುರಿ ಗೊತ್ತು. ಆದರೆ ಬಾಳ ನೌಕೆ ನಡೆಸುವವರು ನಾವಲ್ಲ. ನಾವು ಅಂಬಿಗನ ಕೈಯಲ್ಲಿಯ ಕೈ ಗೋಲು ಮಾತ್ರ. "

"ಅನಂತರಾವ, ನಿಮ್ಮಲ್ಲಿ ನಿರಾಶೆ ಬಹಳ ಇದೆಯಲ್ಲ."

" ಮೊದಲೇ ಹೇಳಿಲ್ಲವೆ ? ಆಶಾ ಹಿ ಪರಮಂ ದುಃಖ್ಖಂ ನಿರಾ ಶಾತ್ ಪರಮಂ ಸುಖಂ. ನಿರಾಶೆಯಿಂದ ನಾನು ಕುಗ್ಗಿಲ್ಲ, ಆಶೆಯಿಂದ ಹಿಗ್ಗಿಲ್ಲ. ಬರುವದೆಲ್ಲವನ್ನೂ ಅವನ ಹಸಾದವೆಂದೇ ಸ್ವೀಕರಿಸುತ್ತೇನೆ. "

" ಹೊರಗಿನ ಸಹಾಯ ಒಂದು ಬಂದು, ಆಶೆಯ ಕಿಡಿಯನ್ನು ಹೊತ್ತಿಸಿ ದರೆ ಸ್ವೀಕರಿಸಬಹುದಲ್ಲ. "

"ಆಶೆಯ ಬೆಳಕನ್ನೇ ಕಾಣುವ ಕಣ್ಣುಗಳೇ ಕುರುಡಾದಾಗ ಆ ಕಿಡಿಯಿಂದ ಪ್ರಯೋಜನ ಏನು ? "

" ಒಮ್ಮೊಮ್ಮೆ ಕುರುಡುಗಣ್ಣುಗಳೂ ತೆರೆಯುವವು. ಆಗ ಬೆಳಕಿನ ಛಾಯೆ ದರ್ಶನವಾಗುತ್ತದೆ. "

ಹೀಗೆಯೇ ಚರ್ಚೆ ಲೌಕಿಕ, ವೇದಾಂತ, ವೈದಿಕ ಮೊದಲಾದ ನೂರಾರು

ರೂಪ ತಾಳುತ್ತಲೇ ಇತ್ತು. ಅರ್ಧ ದಾರಿ ಅರಿವಾಗದೆ ನುಸುಳಿಯೇ ಹೋಗಿತ್ತು. ಮುಗ್ಗುಲದಲ್ಲಿ ನಿಂತಿದ್ದ ರೆಸ್ಟೋರಂಟು ಕೈಮಾಡಿ ಕರೆಯಿತು. ಕೈಗೆ ಬಂದ ಚಹಾ ದಾರಿಯ ದಣುವನ್ನೂ, ಮಾತಿನ ಕಾವನ್ನೂ ಕೆಲಮಟ್ಟಿಗೆ ಕಡಿಮೆ ಮಾಡಿತು. ವಿಮಲೆಯ ಮಾತಿನ ಅರ್ಥವನ್ನು ಅನಂತ ಗ್ರಹಿಸಿದ್ದ. ಅನಂತನ ಅಂತರಾಳವನ್ನೂ ವಿಮಲೆ ಕಂಡುಕೊಂಡಿದ್ದಳು.

ಹೊತ್ತು ಗೊತ್ತಾಗದಂತೆ ನಡೆಯುತ್ತಲೇ ಇತ್ತು. ಅನಂತ "ತಂಗೀ, ಮನೆಗೆ ನಡೆ, ಕಾಕಾ ಹಾದಿ ಕಾಯುತ್ತಿದ್ದಾರು" ಎಂದನು. ವಿಮಲೆಗೆ ಯಾವದೋ ನೋವು ತಾಕಿದಂತಾಯಿತು. ಅನಂತನಿಗಾಗಿ ಮನದಲ್ಲಿಯೇ ಕ್ಷಮೆಕೇಳಿದಳು. ಮನೆಗೆ ಬಂದರು.

ಕರಂದೀಕರ ಕಾಕಾನಿಗೆ ವಿಮಲೆಯಿಂದ ಎಲ್ಲವೂ ತಿಳಿದಿತ್ತು. ತಮ್ಮ ಆಶೆ ನಿರಾಶವಾಗಿದ್ದರೂ ಅನಂತನ ಔದಾರ್ಯಕ್ಕೆ, ಸೌಜನ್ಯಕ್ಕೆ ಕಾಕಾ ಮನ ಸೋತು ಅನಂತನನ್ನು ಮನದಲ್ಲಿಯೇ ಶ್ಲಾಘಿಸಿದರು.

ಅನಂತ ಊರಿಗೆ ಹೊರಡಲು ಅಪ್ಪಣೆ ಕೇಳಿದನು. ಆದರೆ ತಂದೆ ಮಗಳಿಬ್ಬರ ಆಗ್ರಹ ಅನಂತನನ್ನು ಎರಡು ದಿನ ತಡೆಯಿತು.

ಎರಡು ದಿನಗಳೂ ಉರುಳಿದವು. ಅನಂತ ಊರಿಗೆ ಹೊರಡಲು ಆತುರನಾದ. ಪಿತಾಪುತ್ರಿಯರು ಸಮ್ಮತಿಸಿದರು.

ನಿಲ್ದಾಣಕ್ಕೆ ಎಲ್ಲರೂ ಬಂದರು. ಅನಂತ ಗಾಡಿಯಲ್ಲಿ ಕೂತ. ತಂದೆ ಮಗಳಿಬ್ಬರ ಕಣ್ಣಿನಂಚಿನಲ್ಲಿ ಹನಿಗಳು ಕಾಣಿಸಿದವು. ಯಾವ ಶಕ್ತಿ ಅನಂತನನ್ನು ಕರಂದೀಕರರ ಮನೆಯವನನ್ನಾಗಿ ಮಾಡಿತೋ ಯಾರಿಗೂ ತಿಳಿಯಲಿಲ್ಲ. ಆದರೆ ಅಬಾಧಿತವಾದ ಅಲೌಕಿಕ ಆಪ್ತತ್ವ ಮಾತ್ರ ಗಾಢವಾಯಿತು. ಗಾಡಿಯು ಕೂಗು ಕೇಳಿಸಿತು. "ಅನಂತಾ, ನಿನ್ನಂಥ ಸಹೋದರರ ಸಾಮೀಪ್ಯದ ಅರಿವು ನನ್ನಂಥ ಸಾವಿರಾರು ಸಹೋದರಿಯರಿಗೆ ಸಿಗಲಿ" ಎಂದಳು ವಿಮಲಾ. "ಸಹೋದರಿಯರ ಮಂಗಳವೇ ನನ್ನ ಮನದ ಹಂಬಲ" ಎಂಬ ಉತ್ತರ ಅನಂತನಿಂದ ಬಂದಿತು. ಗಾಡಿ ಬಿಟ್ಟಿತು. ಸಾಹೇಬರ ಹಸರು ನೋಟವೊಂದು ಅನಂತನ ಮೇಲೆ ಬಿದ್ದಿತು.

೬

ಮರುದಿನವೇ ಅನಂತ ಕೋಲಲ್ಕಿಗೆ ಬಂದನು. ಬಂದ ಎರಡು ದಿನಗಳ ನಂತರ ರಿಜಲ್ಟೂ ಬಂತು. ಪ್ರತಿಸಾರೆಯಂತೆ ಪ್ರಥಮ ವರ್ಗದಲ್ಲಿ ಉತ್ತೀರ್ಣ ನಾಗಿರದೆ ದ್ವಿತೀಯ ಶ್ರೇಣಿಯಲ್ಲಿ ತೇರ್ಗಡೆಯಾಗಿದ್ದನು.

ತಂದೆತಾಯಿಗಳ ಸಂಗಡ ಊರಿನ ಜನತೆಗೆ ಅನಂತನ ಯಶಸ್ಸು ಆನಂದ ನೀಡಿತು. ವಾಡಿಕೆಯಂತೆ ಪಾರ್ಟಿ ಫಲಹಾರಗಳೂ ಪೂಜೆ ಪುನಸ್ಕಾರಗಳೂ ನೆರವೇರಿದವು. ಆದರೆ ಎಲ್ಲ ಜನರಲ್ಲಿ ಮಲ್ಲನೊಬ್ಬ ಮಾತ್ರ ಇದ್ದಿದ್ದಿಲ್ಲ.

ವೆಂಕಟರಾಯರಿಗೆ ವೃದ್ಧಾಪ್ಯ ಸಮೀಪಿಸಿದ್ದರಿಂದ ಪುನಃ ಮಗನ ಮದುವೆಯ ಮಾತುಗಳು ತಲೆಯೆತ್ತಿದವು. ಅನಂತನಿಗೆ ಏನೂ ತೋಚದಾಯಿತು. ಆದರೂ ಗಟ್ಟಿ ಮನಸು ಮಾಡಿ "ಒಲ್ಲೆ, ಸಧ್ಯ ಬೇಡಾ" ಎಂದನು. ತಂದೆ ತಾಯಿಗಳು ತಮ್ಮಲ್ಲಿಯೇ ಅನಂತನ ಬಗ್ಗೆ ವಿಚಾರಿಸ ಹತ್ತಿದರು.

ತಿಂಗಳೊಪ್ಪತ್ತಿನಲ್ಲಿಯೇ ಅನಂತ ಕಾಲೇಜಕ್ಕೆ ಹೋಗಬೇಕಾದದ್ದರಿಂದ ಅವನ ಮುಂದಿನ ಶಿಕ್ಷಣದ ಬಗ್ಗೆ ವಿಚಾರ ಕೋಲಾಹಲವೇ ಎದ್ದಿದೆ. ಮುಂದೆ ಹೇಗೆ ? ಎಂಬುದು ಯಕ್ಷಪ್ರಶ್ನೆಯಾಯಿತು. ಆದರೆ ಎಷ್ಟೋ ಸಾರೆ ದೈವ ಅನಂತನ ಸಂಗಡವೇ ಓಡುತ್ತಲಿತ್ತು. ಅವ್ಯಕ್ತ ಶಕ್ತಿಯಲ್ಲಿ ವಿಶ್ವಾಸವಿಟ್ಟ ಅನಂತ ನ್ಯೂನತೆ ಶೂನ್ಯತೆಯಿಂದ ಮನ ಮ್ಲಾನವಾದರೂ, ಅವಘಡಪ್ರಾಯವಾದ ಅಪವಾದಗಳು ಬಂದರೂ ಅಕ್ಕರ ಅಕ್ಕಸ ತಾಳದೆ ಸಮುದ್ರನಾಥನಂತೆ ಎಲ್ಲವನ್ನೂ ಒಡಲಿನಲ್ಲಿ ನುಂಗಿಕೊಂಡು ಸಾಗಹತ್ತಿದ್ದ. ಉಬ್ಬಲುರವಣಿಗೆಗಳು ಉಬ್ಬಣಿಸಿ ಬಂದರೂ ಯಾವದೋ ಶಕ್ತಿ ಅನಂತನನ್ನು ಮುಂದೆ ನಡೆಸುತ್ತಿತ್ತು.

ರೂಢಿಯಂತೆ ಕಮಲಾಬಾಯರು ಮುಂಜಾನೆ ಗುಡಿಗೆ ಹೋದರು. "ಅಲ್ಲ ಕಮಲಾಬಾಯಿ, ಬಂದ ಕನ್ಯಾ ಬಿಡೋದೇನ ಒಳ್ಳೇದ, ನೋಡು ನಿಮಗರ ಹೇಳಿಕೊಳ್ಳಾಂಗ ಏನ ಅದ ?" ಎಂದು ಪುಷ್ಪಾಬಾಯಿ ಅಂದಳು. "ಏನೋರೆವ್ವ, ಹುಡುಗನಃ ಒಲ್ಲೆಂದ" ಎಂದು ಕಮಲಾಬಾಯರು ಉತ್ತರಿ

ಸಿದರು. ಕೂಡಲೇ ಹಿರಿಯಳಾದ ಕಾವೇರಮ್ಮ "ಏ ಕಮಲಾಬಾಯಿ, ಯಾಕಃ ನಿನಗೇನಾಗಿತ್ತು ? ಸಾಯೊ ಮುಂದ ಸೊಸಿ ನೋಡಿ ಸಾಯ ಬಾರದ? ನಾಳೆ ಸಪಾಸಾಗಿ ಮನಿ ಹಿಡಿದು ಮಗಾ ಕೂತಮ್ಯಾಲೆ ಕನ್ಯಾ ಯಾರ ಕೊಡತಾರ ?" ಎಂವರು. ದೇವರ ದರ್ಶನಕ್ಕೆ ಬಂದ ಆಚಾರ್ಯರು "ಕುಲಾ ಜಾತಿ ಬಿಟ್ಟ ಅವಿವೇಕರಿಗೆ ಯಾವ ಬ್ರಾಂಬರು ಕನ್ಯಾ ಕೊಡ ತಾರ ?" ಎಂದರು. ಮಗನ ಬಗ್ಗೆ ಜನರಾಡಿದ ಮಾತು ಕೇಳಿ ಕಮಲಾ ಬಾಯರ ಕೋಮಲ ಮನ ನೊಂದಿತು. ಮನದಲ್ಲಿ ನಟ್ಟ ಮಾತುಗಳು ಕಮಲಾಬಾಯರನ್ನು ಕೊರೆಯಹತ್ತಿದವು. ದೇವರಿಗೆ ಕೈಮುಗಿದು "ಅನಂತನೂ ಒಬ್ಬ ಮನುಷ್ಯನಾಗಲಿ" ಎಂದು ಬೇಡಿಕೊಂಡು ಮನೆಗೆ ಬಂದರು.

ಮನೆಗೆ ಬರುವದೇ ತಡ "ಅವ್ವಾ ಇಲ್ನೋಡು, ನನ್ನ ಮತ್ತೊಂದು ಕಥಿ ಪ್ರಿಂಟಾಗಿ ಬಂದದ" ಎಂದು ಅಕ್ಕರತೆಯಿಂದ ತಾಯಿಗೆ ತೋರಿಸಿದನು. ಮಗನ ಸಾಹಿತ್ಯ ನೋಡಿ ಕಮಲಾಬಾಯರ ಮನ ತುಂಬಿತು.

ಅನಂತ ದಿನಾಲು ತನ್ನ ತಾಯಿಗೆ ಕಥೆ ಕಾದಂಬರಿ ಓದಿ ಹೇಳುತ್ತಿದ್ದ. ದಿನಗಳೆದಂತೆ ಕಮಲಾಬಾಯರ ಸಂಗಡ ಜನವೂ ಹೆಚ್ಚು ಸೇರಹತ್ತಿತು. ಹಿಂದಕ್ಕೆ ಆರಂಭಿಸಿದ್ದ ಪ್ರೌಢಶಾಲೆಯ ಸದಸ್ಯರೆಲ್ಲರೂ ಕೂಡಹತ್ತಿದ್ದರು. ಒಂದು ದಿನ ರಾಮಾಯಣ ಕಥೆ ಹೇಳಿದರೆ, ಇನ್ನೊಂದು ದಿನ ಬಾಯಬಲ್ಲಿನ ಕಥೆ, ಮತ್ತೊಂದು ದಿನ ಕುರಾನಿನ ಕಥೆ, ನಡುನಡುವೆ ದಾಸರ ಪದ, ಶಿವ ಶರಣರ ವಚನಗಳನ್ನೂ ಹೇಳುತ್ತಿದ್ದನು. ಅನಂತನ ಮನೆ ಮಠವಾಗಿ ಪಾಠ ಶಾಲೆಯಲ್ಲಿ ಪರ್ಯಾವಸಾನವಾಯ್ತು. ಕೆಲವು ಜನರು ಇದು ನಿರುದ್ಯೋಗಿಯ ಲಕ್ಷಣವೆಂದರು. ಇನ್ನುಳಿದ ಹಲವರು "ಅಂತಪ್ಪ ಮಾಸ್ತರ ಎಂಥಾ ಮನಿಸ್ಯಾರಿ" ಅಂದರು.

ಜನ ಬಳಗ ಬೆಳೆದದ್ದರಿಂದ ಪ್ರತ್ಯೇಕ ಖೋಲಿಯೊಂದನ್ನು ಬಾಡಿಗೆ ಹಿಡಿದನು. ಇಮ್ಮಡಿ ಉತ್ಸಾಹದಿಂದ ಪ್ರೌಢಶಾಲೆ ನಡೆಯಹತ್ತಿತು. ಊರಿನ ಜನರಲ್ಲಿ ಅನಂತನ ಬಗ್ಗೆ ಗೌರವ ಹೆಚ್ಚಿತು.

ಜನರಿಗೆ ಕಥೆಗಳ ಸಂಗಡ ಸಾರ್ವಜನಿಕ ಜೀವನಕ್ಕೆ ಅವಶ್ಯವಾದ ಸಹಕಾರ, ಆರ್ಥಿಕಪಾಠ ಮೊದಲಾದವುಗಳನ್ನು ತಿಳಿಸಹತ್ತಿದನು. ಊರಿನ

ಬಹುಜನರು ಅಕ್ಷರಿಗಳಾದರು. ಜನರ ಆಗುಹೋಗುಗಳಲ್ಲಿ ಅನಂತನೂ ಪಾಲುಗಾರನಾದನು. ಸಕಲ ಜಾತಿಗೂ ಬಂಧುವಾದನು.

ಒಂದು ರವಿವಾರ ಅನಂತನಿಗೆ ಮೈಯಲ್ಲಿ ಸ್ವಾಸ್ಥ್ಯವಿರಲಿಲ್ಲ. ಮನೆಯಲ್ಲಿಯೇ ಇದ್ದನು. ಮಧ್ಯಾಹ್ನ ಮೂರು ಹೊಡೆದರೂ ಮನೆಯ ಕಡೆ ಯಾವ ರೈತನೂ ಬರಲಿಲ್ಲ. ಅನಂತ ತನ್ನ ಬಗ್ಗೆ ಜನತೆಯಲ್ಲಿ ತಪ್ಪು ಕಲ್ಪನೆಯಾಗಿರಬಹುದೆಂದು ಭಾವಿಸಿದ. ಸತ್ಯ ಸಂಗತಿಯ ನಿದರ್ಶನಕ್ಕಾಗಿ ತಾನೇ ಶಾಲೆಯ ಕಡೆಗೆ ಹೋದನು. ಆದರೆ ಅಲ್ಲಿಯ ದೃಶ್ಯ ಅನಂತನನು ಮಂಕು ಹಿಡಿಸಿತು. ಮಧ್ಯಾಹ್ನ ಮೂರು ಹೊಡೆದಿದ್ದರೂ ಬಿಸಿಲೆನ್ನದೆ ಗೋಡೆಗಳಿಗೆ ಸುಣ್ಣ ಬಳೆಯುವ, ನೆಲ ಹಸನ ಮಾಡುವ ರೈತರ ತಂಡ ಅನಂತನಲ್ಲಿ ಅವ್ಯಕ್ತ ಆನಂದವನ್ನು ಉಂಟುಮಾಡಿತು. ಹೃದಯ ಕರಗಿ ನೀರಾಯಿತು. ನೂರಾರು ಜನರಲ್ಲಿ ತಾನೂ ಒಬ್ಬನಾದ.

ಈಗ ಅನಂತನಿಗೆ ಮೈತುಂಬ ಕೆಲಸ ಹತ್ತಿತು. ಅನಂತನ ಕರ್ತೃತ್ವ ಶಕ್ತಿಗೆ ಮನಸೋತ ಶಿಷ್ಯರೆಲ್ಲರೂ ಸಂಭಾವನೆ ತಂದುಕೊಡಹತ್ತಿದರು. ಆದರೆ ಅನಂತ ಎಲ್ಲ ಸಂಭಾವನೆಯನ್ನೂ ಶಾಲೆಯ ವಾಚನಾಲಯಕ್ಕೆ ಕೃಷ್ಣಾರ್ಪಣವೆಂದನು.

ದಿನದಿನಕ್ಕೆ ಶಾಲೆ ಹೊಸತನ ಪಡೆಯುತ್ತ ನಡೆಯಿತು ಗೋಡೆಗಳು ವಿಭೂತಿಪುರುಷರ, ಶಿವಶರಣ ಶರಣೆಯರ, ಅಲೌಕಿಕ ದಾಸ ದಾರ್ಶನಿಕರ ಪಟಗಳಿಂದ ಅಲಂಕಾರಗೊಂಡವು. ಅನಂತ ಕಾಲೇಜಕ್ಕೆ ಬೇಗನೆ ಹೋಗುವವನಿದ್ದುದರಿಂದ ಅವನ ಇರುವಿಕೆಯಲ್ಲಿಯೇ ಹೊಸ ಶಾಲೆಯ ಪ್ರಾರಂಭೋತ್ಸವ ಮಾಡಬೇಕೆಂದು ಜನ ನಿಶ್ಚಯಿಸಿತು.

ಗುರುವಾರ ಆ ಶುಭಕಾರ್ಯಕ್ಕಾಗಿ ಗೊತ್ತುಮಾಡಲ್ಪಟ್ಟಿತು. ಧಾರವಾಡದಿಂದ ಜಗದ್ಗುರುಗಳೊಬ್ಬರು ಬಂದಿದ್ದರು. ಜನರು ಮೈಮುಟ್ಟಿ ದುಡಿದದ್ದರಿಂದ ಉತ್ಸವಕ್ಕೆ ಹೊಸ ಕಳೆ ಬಂದಿತ್ತು. ಆ ಸಭೆಗೆ ಅಧ್ಯಕ್ಷರು ವಿಶ್ವನಾಥ ಭಟ್ಟರು. ಮುಖ್ಯ ಅತಿಥಿಗಳು ಧಾರವಾಡದ ವೀರಶೈವ ಸನ್ಯಾಸಿಗಳು.

ಎಪ್ಪತ್ತೆರಡು ವರುಷದ ಊರ ಹಿರಿಯ ಕನಕಪ್ಪನಿಂದಲೇ ಅನಂತ ಸ್ವಾಗತಭಾಷಣ ಮಾಡಿಸಿದನು. ನಂತರ "ನೋಡ್ರಿ, ನಾವು ಒಕ್ಕಟ್ಟು ಆಗ

ದಿದ್ದರೆ ನಮ್ಮದು ಕಲ್ಯಾಣ ಆಗಾಕಿಲ್ಲ. ಎಲ್ಲಾ ಜಾತಿ ಏಸ ಅವ, ಅವು ಸುಳ್ಳು ಅವ. ನಮ್ಮ ನಮ್ಮ ಒಳಗ ಏಸ ಜಗಳ ಅವ, ಅವನ್ನೆಲ್ಲಾ ಮುರ್ಯಾಕ ಬೇಕು.” ಎಂದು ಇನ್ನೊಬ್ಬ ರೈತ ಚಿಕ್ಕ ಭಾಷಣ ಮಾಡಿದನು. ನಂತರ ಅತಿಥಿಗಳು “ರೈತ ಮಕ್ಕಳೇ, ನಿಮ್ಮ ಈ ಕಾರ್ಯವನ್ನೂ ಇದನ್ನು ಮಾಡಲು ಹುರಿದುಂಬಿಸಿದ ನಿಮ್ಮ ಅಂತಪ್ಪ ಮಾಸ್ತರನ್ನೂ ನೋಡಿ ನನಗೆ ಆನಂದವಾಗಿದೆ. ನೀವೆಲ್ಲರೂ ಒಂದೇ. ಜಗತ್ತಿನಲ್ಲಿ ಇರುವದು ಎರಡೇ ಜಾತಿ. ಒಂದು ದುಡಿಯುವದು, ಇನ್ನೊಂದು ದುಡಿಸಿಕೊಳ್ಳುವದು. ಎಲ್ಲರ ದೇವನೂ ಒಬ್ಬನೇ. ಆದರೆ ಆತನನ್ನು ನೋಡುವ ದೃಷ್ಟಿಗಳು ಮಾತ್ರ ಬೇರೆ. ಹರಿಜನ ಹಿರಿಜನ ಎಲ್ಲರೂ ಒಂದೇ ನೆಲದ ಮಕ್ಕಳು. ನಿಮ್ಮ ಆಶೆ ಕೈಗೂಡಲಿ” ಎಂದು ನಾಲ್ಕೇ ಮಾತು ಹೇಳಿ ಆಶೀರ್ವದಿಸಿದರು. ನಂತರ ಅಧ್ಯಕ್ಷರಾದ ವಿಶ್ವನಾಥಭಟ್ಟರು ಸಿಂಹವಾಣಿಯಲ್ಲಿ “ಜಡವಾದ ಈ ಪ್ರಕೃತಿಯು ಸತ್ವ, ರಜೋ, ತಮೋ ಗುಣಗಳದ್ದು. ಇದರಲ್ಲಿ ಪಂಚಭೂತಗಳಾದ ಪೃಥ್ವಿ, ಅಪ್, ತೇಜ, ವಾಯು, ಆಕಾಶಗಳು ಅಡಕವಾಗಿವೆಯೆಂದೂ, ಇದರಲ್ಲಿಯೇ ಜ್ಞಾನಿಗಳೂ, ಅಜ್ಞಾನಿಗಳೂ, ಕ್ಷರರೂ, ಅಕ್ಷರರೂ ಇರುವರೆಂದೂ ಸರ್ವ ಪ್ರಾಣಿಗಳ ಹೃದಯದಲ್ಲಿ ‘ಓಂ ತತ್ ಸತ್’ ಎಂಬ ಹೆಸರುಳ್ಳವನು ನಿಂತಿರುವನೆಂದೂ ಆದ್ದರಿಂದ ಪರಮಾತ್ಮನಿಂದಲೇ ಹುಟ್ಟಿದ ನಾವೆಲ್ಲರೂ ಒಂದೇ ಇರುವೆವು. ಆದರೂ ನಮ್ಮ ನಮ್ಮಲ್ಲಿ ದೈಹಿಕ ಮಾನಸಿಕ ಅಂತರ ಉಂಟು. ಆದರೆ ಆ ಅಂತರ ನಾವೆಲ್ಲರೂ ಮಾನವರೆಂಬಲ್ಲಿ ಅಡ್ಡಬರಲಾರದು. ನಿಮ್ಮಲ್ಲಿ ಇಂದು ಅಂಕುರವಾಗಿರುವ ಈ ಅಭಿಮಾನ ಆಶೆಗಳು ಮರವಾಗಿ ಬೆಳೆಯಲಿ, ಭಗವಂತ ನಿಮಗೂ ನಿಮ್ಮ ಕಾರ್ಯಕ್ಕೂ ಯಶ ನೀಡಲಿ” ಎಂದು ಹೇಳಿ ಭಾಷಣ ಮುಗಿಸಿದರು. ಅನಂತನು ಶಾಲೆಗೆ ಸ್ವಾಮಿಗಳು ‘ವಾಣೀವಿಹಾರ’ ಎಂದು ನಾಮಕರಣ ಮಾಡಿದ್ದಾರೆಂದು ಕೂಡಿದ ಜನಕ್ಕೆಲ್ಲ ಹೇಳಿ ಆಭಾರ ಮನ್ನಿಸಿದನು.

ಕೋಲಕ್ಕಿ ಆದರ್ಶ ಗ್ರಾಮವಾಯಿತು. ತಮ್ಮ ಓಣಿ ತಾವೇ ಸ್ವಚ್ಛ ಇಡಹತ್ತಿದರು. ಊರಿಗವಶ್ಯವಾದ ಬಾವಿ ಅನಂತನ ಅಧ್ಯಕ್ಷತೆಯಲ್ಲಿ ಊರಿನವರಿಂದಲೇ ಸಿದ್ಧವಾಯಿತು. ಊರ ಹಿರಿಕಿರಿಯರೆಲ್ಲರೂ ವಾಣೀವಿಹಾರದ ಸದಸ್ಯರಾದರು.

ಅನಂತ ಧಾರವಾಡಕ್ಕೆ ಹೋಗಲು ಎರಡೇ ದಿನ ಉಳಿದವು. ತಂದೆ ವೆಂಕಟರಾಯರು ಎಲ್ಲಿಯೋ ಸಾಲ ತಂದು ಅನಂತನಿಗೆ ಹಣ ಕೊಟ್ಟರು. ಮನೆಯಲ್ಲಿಯೂ ಸಿದ್ಧತೆ ಮುಗಿಯಿತು. ರಾತ್ರಿಯಲ್ಲಿ ತಂದೆ ತಾಯಿ ಮಗ ಕೂಡಿ ವಿಚಾರಿಸಿದರು. ನಿದ್ರೆ ಬಂದದ್ದರಿಂದ ಅನಂತ ಖೋಲಿಗೆ ಹೋದ. ಗಂಡಹೆಂಡತಿಯರು ಏನೇನೋ ಮಾತಾಡುತ್ತ ಬಹಳ ವೇಳೆ ಕುಳಿತರು.

ಅನಂತನಿಗೆ ಒಂದು ಕನಸು ಬಿದ್ದಿತ್ತು. ಆವರಲ್ಲಿ ಯಾರದೋ ಒಂದು ಮದುವೆ. ಕನ್ಯೆ ಪರಿಚಿತವಿದ್ದರೂ ಹೆಸರು ನೆನಪಿಲ್ಲ. ವರ ಉಚ್ಚ ಅಧಿಕಾರಿ. ಅವರ ಪರಿಚಯದಿಂದ ಅನಂತನಿಗೆ ಸಬ್‌ಇನಸ್ಪೆಕ್ಟರ ನವಕರಿ ದೊರೆಯಿತು. ಡ್ರೆಸ್ಸು ಧರಿಸಿ ಪರೇಡ್ ಗ್ರೌಂಡಿಗೆ ಹೋದನು. ‘ಅಟೆನ್‌ಶನ್’ ಎಂಬ ಸಪ್ಪಳ ಕೇಳಿಸಿತು. ಗಾಬರಿಯಾಗಿ ಕಣ್ಣು ತೆರೆದು ನೋಡುತ್ತಾನೆ— ಅದೇ ಮನೆ, ಅದೇ ಹಾಸಿಗೆ, ಅದೇ ಕೋಲಳ್ಳಿ.

ಲಗುಬಗೆಯಿಂದ ಎದ್ದು ವಿಧಿನಿಯಮಗಳನ್ನೆಲ್ಲ ತೀರಿಸಿ ಕನಸಿನಲ್ಲಿ ಕಂಡದ್ದನ್ನು ತಾಯಿಗೆ ತಿಳಿಸಿದನು. “ಏನೋಪಾ ಮಾರಾಯಾ, ಮಾಸ್ತರ ಅಥವಾ ಮಾಮಲೇದಾರ ಆಗಾಂವ ಪೋಲೀಸ ಹ್ಯಾಂಗ ಆಗತೀಯೋ” ಎಂದು ಕಮಲಾಬಾಯರು ಅಂದರು. ಆದರೆ ಅಲ್ಲೇ ನಿಂತಿದ್ದ ಭಟ್ಟರು “ಯಾರಿಗ್ಗೊತ್ತು? ದೇವರ ಸಂಕಲ್ಪ ಹಾಂಗ ಇದ್ದರ, ಯಾರೇನ ಮಾಡತಾರ, ಆದರೂ ಆಗಬಹುದು. ಅದು ಛಲೋನ” ಎಂದು ತಮ್ಮ ಸಹಜ ಶೈಲಿಯಲ್ಲಿ ನುಡಿದರು. ಸಾಹಿತ್ಯ, ಸಂಗೀತ, ಕಥೆ, ಕಾವ್ಯಗಳಲ್ಲಿ ಕಾಲಕಳೆಯುವ ನಾನು ಸಂಸ್ಕೃತಿ ಶೂನ್ಯವಾದ ಖಾತೆ ಸೇರುವೆನೆ? ಎಂದು ಅನಂತ ತನ್ನನ್ನೇ ತಾನು ಪ್ರಶ್ನೆ ಕೇಳಹತ್ತಿದನು.

ಆಗಲೇ ವೇಳೆಯಾದ್ದರಿಂದ ಊಟ ಮಾಡಿ ಊರಿಗೆ ಹೊರಟನು. ನೆರೆದ ಪರಿವಾರ “ಬ್ಯಾಗ ಬಾ ಯಪ್ಪಾ” ಎಂದು ಹೇಳಿದರು. ಅನಂತ ‘ಹೂಂ’ ಎಂದ.

೩

ಜಾಲೀ ಜೂನಿಯರದಲ್ಲಿ ಅನಂತ ಕಾಲಿಟ್ಟ. ಪುನಃ ಧಾರವಾಡದಲ್ಲಿ ಅನಂತನ ಜೀವನ ನಡೆಯಹತ್ತಿತು. ಎಲ್ಲ ಒಡನಾಡಿಗಳೂ ಬಂದು ಯೋಗ ಕ್ಷೇಮ ಕೇಳಿ ಅಭಿನಂದನೆ ಅರ್ಪಿಸಿದರು.

ಅಭ್ಯಾಸ ಅಷ್ಟು ಇರದಿದ್ದರೂ ಅನಂತನಿಗೆ ವೇಳೆಯೇ ಸಾಲುತ್ತಿರಲಿಲ್ಲ. ಬರೆದುಳಿದ ಕಾದಂಬರಿ ಬರೆಯಲುಪಕ್ರಮಿಸಿದ್ದ. ಸಂಗಡ ಸಾಹಿತ್ಯದ ಅಭ್ಯಾಸ ವನ್ನೂ ನಡಿಸಿಯೇ ಇದ್ದ.

ಬರುವಾಗಲೇ ಹಣ ಸ್ವಲ್ಪ ತಂದದ್ದರಿಂದ ಇದ್ದ ದುಡ್ಡೆಲ್ಲವೂ ಸವೆ ಯಹತ್ತಿತು. ಹಾಳಿ ಮಸಿಗಳನ್ನು ಕೊಳ್ಳಬೇಕಾದರೂ ಹೆರವರನ್ನು ಕಾಯ ಬೇಕಾಯಿತು.

ಆದರೆ ಕಾಲೇಜಿನಲ್ಲಿ ನಡೆಯುವ ಎಲ್ಲ ಚಟುವಟಿಕೆಗಳಲ್ಲಿಯೂ ಅನಂತನ ಅಂಗ ಇರಲೇಬೇಕಾಗಿತ್ತು. ಬಡಹುಡುಗರ ಸಹಾಯಾರ್ಥವಾಗಿ ಕಾಲೇಜಿ ನಿಂದ ಒಂದು ನಾಟಕವಾಯಿತು. ಅದರಲ್ಲಿಯು ರಾಜಪಾತ್ರ ಅನಂತನದೆ. ನಿರೂ ಪಣಾಶೈಲಿ, ವಿಕಟ ವಿನೋದಗಳಲ್ಲಿಯ ವಾಕ್‌ಚಾಪಲ್ಯತೆ ಎಲ್ಲವುಗಳಲ್ಲಿ ಅನಂತ ನದೇ ಕೈ. ಸಾಹಿತ್ಯೋಪಾಸಕ ಅನಂತ ನಾಟಕಕಾರನೂ ಆದ. ಅವನ ಕಲೆಗೆ ಮೆಚ್ಚಿ ಮೆಡ್ಲು ಕೊಟ್ಟರು.

ಅವನ ಕಿಸೆಯಲ್ಲಿ ಇರುವದೆಂದರೆ ಅದೇ ಸ್ಟೆನ್‌ಲೆಸ್ ಸ್ಟೀಲಿನ ಮೆಡ್ಲ ಒಂದೆ. ಅಡಿಗೆ ಮಾಡಬೇಕೆಂದರೆ ಖೋಲಿ ಸುದಾಮನ ಮನೆ. ಮಂಕು ಹಿಡಿದವನಂತೆ ಕೆಲ ಹೊತ್ತು ಸುಮ್ಮನೇ ಕೂತ. ಆದರೆ ಹೊಟ್ಟೆಯದಾಹ ಕೇಳುವದೆ ?

ಏನೋ ವಿಚಾರಿಸುತ್ತ ಹೊರಗೆ ಹೊರಟನು. ಹಿಂದಿನಿಂದ ‘ ಸಾಹೇಬರ ’ ಎಂಬ ಧ್ವನಿ ಕೇಳಿಸಿತು. ತಿರುಗಿ ನೋಡಿದನು, ಒದರಿದ ವ್ಯಕ್ತಿ ಪೋಸ್ಟಮನ್ ರಾಮಣ್ಣನಾಗಿದ್ದನು. ಹಿಂದಕ್ಕೆ ದೀಪಾವಳಿ ಸಂಚಿಕೆಯ ‘ ನಾಗರಿಕಕ್ಕೆ ’ ಕಳಿಸಿದ ಲೇಖನಕ್ಕೆ ಸಂಪಾದಕರು ಮೂರು ತಿಂಗಳ ಮೇಲಾದರೂ ಹತ್ತು ರೂಪಾಯಿ ಕಳಿಸಿದರು. ನೀರಿನಲ್ಲಿ ಮುಳುಗುವವನಿಗೆ ಹುಲ್ಲು ಕಡ್ಡಿಯೇ

ಆಸರವಲ್ಲವೆ? ರಾಮಣ್ಣನಿಗೆ ಎರಣಾಡೆ ಕೊಟ್ಟು ನೇರವಾಗಿ ನಂಬರ ಮನೆಯಲ್ಲಿ ಊಟಮಾಡಿ ಬಂದ.

ನೂರಾರು ವಿಚಾರಗಳು ಜ್ವಾಲಾಮುಖಿಯಂತೆ ಒಮ್ಮೆಲೇ ಎದ್ದವು. ಪುಟಿಚಂಡಿನಂತೆ ಪುಟಿದೆದ್ದ. ಆದರೆ 'ತಾಳಿದವ ಬಾಳುವವ' ಎಂದು ತಾಯಿ ಹೇಳಿದ ಮಾತು ನೆನಪಾದ್ದರಿಂದ ವಿಷಕಂಠನಂತೆ ಬಂದ ಎಲ್ಲ ಯಮ ಯಾತನೆಯನ್ನೂ ನುಂಗಿದನು. ಆದರೆ ಮುಂದೇನು? ಎಂಬ ಪ್ರಶ್ನೆ ಇನ್ನೂ ಪ್ರಶ್ನೆಯೇ ಆಗಿತ್ತು. ನಿರಾಶೆಯ ಕತ್ತಲೆಯಲ್ಲಿ ಬಡತನದ ಬಿರುಗಾಳಿ ಬೀಸುತ್ತಲೇ ಇತ್ತು. ವ್ಯಸನ ವ್ಯಾಕುಲತೆಗಳ ಮಿಂಚು ಮೂಡುತ್ತಲೇ ಇತ್ತು.

ಕಾಲೇಜ ಯೂನಿಯನ್ನಿನ ಸಮಾರಂಭವಿದ್ದದ್ದರಿಂದ ಕಾಲೇಜಕ್ಕೆ ಅನಂತ ಹೋದನು. ಅಂದಿನ ಭಾಷಣದ ವ್ಯವಸ್ಥೆ ಮಾಡಲು ಸ್ವಲ್ಪ ಮೊದಲೇ ಅನಂತ ಬಂದಿದ್ದ. ಇಂಟರಿನಲ್ಲಿ ಕಲಿಯುತ್ತಿದ್ದ ಸರೋಜಳೆಂಬ ಹುಡುಗಿಯೊಬ್ಬಳು ಬಂದು "ಇದನ್ನ ಬರದೀನಿ ಸ್ವಲ್ಪ ತಿದ್ದಿಕೊಡತೀರಾ? Excuse me" ಎಂದಳು. ಸಾವಿರ ಸಹೋದರಿಯರ ಸಹೋದರನಾದ ಅನಂತ ಸಂತಸದಿಂದ 'ಹೂಂ' ಕೊಟ್ಟನು. ಅಂದಿನ ಅತಿಥಿಗಳು "ವಿದ್ಯಾರ್ಥಿಗಳ ಕರ್ತವ್ಯ" ಎಂಬ ಬಗ್ಗೆ ಎರಡು ತಾಸು ದೀರ್ಘವಾಗಿ ಮಾತನಾಡಿದರು. ಸ್ತ್ರೀಯರ ಪ್ರತಿನಿಧಿ ಸರೋಜಳೇ ಆಭಾರ ಮನ್ನಿಸಿದಳು.

ಖೋಲಿಗೆ ಬಂದನು. ವಿಧಿಯು ಅನಂತನ ಸಂಗಡ ಸ್ಪರ್ಧೆಯನ್ನೇ ನಡೆಸಿತ್ತು. ಬಾಡಿಗೆಯ ಭೂತ ನಿಂತಿತ್ತು. ಹೊಟ್ಟೆ ಒದರುತ್ತಲೂ ಇತ್ತು. ಊಟ ಮಾಡಿ ಮಲಗಲು ಹಾಸಿಗೆ ಹಾಸಿದನು. ಮನದ ಬೇಗುದಿ ರಭಸ ನಿದ್ರೆಯನ್ನು ಓಡಿಸಿತು. ಸೂರಿಯಾಗಬೇಕೆಂದು ಹದಿಬದ ಆಚಾರಗಳನ್ನು ತಪ್ಪದೇ ಪಾಲಿಸುತ್ತಿದ್ದರೂ ಹೃದಯದ ಯಾವುದೋ ಮೂಲೆಯಲ್ಲಿ ಚಿಂತೆಯ ವಿಸ್ಫುಲಿಂಗ ಹೊತ್ತುತ್ತಲೇ ಇತ್ತು. ಸರೋಜ ಕೊಟ್ಟ ಕವನವನ್ನು ಓದುವಾಗ ಎಲ್ಲವನ್ನೂ ಮರೆತು ಕ್ಷಣಕಾಲ ಆಕಾಶವನ್ನೇ ನಿಟ್ಟಿಸತೊಡಗಿದನು. ಮನದಲ್ಲಿಯೇ ಸರೋಳಜನ್ನು ಹೊಗಳಿದನು. ಮರುಕ್ಷಣದಲ್ಲಿಯೇ ಅಂದಿನ ಅತಿಥಿಗಳಾಗಿ ಬಂದು ಭಾಷಣ ನೀಡಿದ ಸಿರಿವಂತ ಎಂ.ಎಲ್.ಎ.ಗಳ ಭಾಷಣ ಅನಂತನನ್ನು ಕೊರೆಯಹತ್ತಿತು. "ಇಂದಿನ ವಿದ್ಯಾರ್ಥಿಗಳು ದುಡಿಯಲು ಹಿಂಜರಿಯುತ್ತಾರೆ. ಅವರಲ್ಲಿ ಆಲಸ್ಯವು ಬೆಳೆದಿದೆ. ಮಾತು ಮಾತಿಗೆ ಹಣ

ಬೇಕೆನ್ನುತ್ತಾರೆ. ಹಣ ಏಕೆ ಬೇಕು? ಕೆಲಸ ಮಾಡಿರಿ. ಅಧಿಕಾರದ ಮೋಹ ವನ್ನೂ ಸ್ವಾರ್ಥವನ್ನೂ ಬಿಡಿರಿ. ಈ ಜಗತ್ತಿನಲ್ಲಿ ದುಡ್ಡು ಮುಖ್ಯವಲ್ಲ. ವಿದ್ಯಾರ್ಥಿ ಗಳು ರಾಜಕಾರಣದಿಂದ ದೂರ ಉಳಿಯಿರಿ" ಎಂದು ಅಂದ ಭಾಷಣದ ಅರ್ಥ ಅನಂತನಿಗೆ ಆಗಲಿಲ್ಲ. ಎಷ್ಟೋ ಹೊತ್ತು ವಿಚಾರಿಸಿ ಕೊನೆಗೆ "ಹೌದು ಹಣ ವಿದ್ದವರೆಲ್ಲರೂ ಭಾಷಣಕಾರರಾಗಬಹುದು. ತನ್ನ ಅನ್ನ ತನಗೆ ಸಾಕಾಗುವಷ್ಟು ಇದ್ದ ಮೇಲೆ ಹೆರವರಿಗೆ ತತ್ತ್ವೋಪದೇಶ ಮಾಡಬಹುದು. ಪರರಿಗೆ ಉಪದೇಶ ಮಾಡಬೇಕಾದರೆ ನನ್ನ ಸ್ಥಿತಿ ಗಟ್ಟಿ ಮಾಡಿಕೊಳ್ಳಬೇಕು.

ಇಂದಿನ ಜೀವನ ಮರಣದ ಹೋರಾಟವೇ ರಾಜಕಾರಣವಾಗಿರುವಾಗ ವಿದ್ಯಾರ್ಥಿಗಳು ಯಾವ ಕಾರಣದಿಂದ ಅಲಿಪ್ತರಿರಬೇಕು? ಹಣಕ್ಕಾಗಿ ದುಡಿ ಯದಿದ್ದರೆ ಯಾತಕ್ಕಾಗಿ ದುಡಿಯಬೇಕು? ಹೆರವರ ಹೆಂಡಂದಿರನ್ನು ಅವ ಮಾನಗೊಳಿಸಲು ಹಣ ಬೇಡ; ಪರರನ್ನು ವಂಚಿಸಲು ಹಣ ಬೇಡ; ಸ್ವಾರ್ಥ ಸಾಧಿಸಲು ಹಣ ಬೇಡ; ದುಡಿಮೆಯಿಂದ ಪೈಮುಟ್ಟೆ ಗಳಿಸದೆ ಪರರ ಹಣ ಪುಕ್ಕಟೆಯಾಗಿ ಅಪೇಕ್ಷಿಸಿದರೆ ಅನ್ಯಾಯವಾಗುತ್ತದೆ. ಆದರೆ ನಾನು ದುಡಿದ ಕೆಲಸಕ್ಕೆ ನನಗೆ ದುಡ್ಡು ಬೇಡವೆ? ನನ್ನ ಒಡಲಿಗಾಗಿ, ನನ್ನನ್ನೇ ನಂಬಿದ ನನ್ನ ತಂದೆ-ತಾಯಿಗಳ, ಒಡನಾಡಿಗಳ ಹಿಡಿಗೂಳಿಗಾಗಿಯೂ ಹಣ ಬೇಡವೆ? ವಿದ್ಯೆ ಕಲಿಯುವದು ಸಿರಿವಂತರ ಸೊತ್ತಲ್ಲ. ಪರರಿಂದ ಸುಲಿಯಲ್ಪಟ್ಟು ರಾಸಿ ಯಾಗಿ ಬಿದ್ದ ಹಣ ಕೊಡುವದು ಅವರ ಧರ್ಮವಲ್ಲ ಆದರೆ ಕರ್ತವ್ಯ. ದುಡ್ಡಿ ಲ್ಲದವ ದುಡ್ಡು ಕೇಳುವದು ಭಿಕ್ಷೆ ಅಲ್ಲ. ಅದು ಅವನ ಜೀವನದ ಹಕ್ಕು" ಎಂದು ಖೋಲಿಯಲ್ಲಿ ಅನಂತ ಒಬ್ಬನೇ ಬಡಬಡಿಸಿದನು. ಕಾದ ದೇಹ ಹಾಸಿಗೆ ಅಪ್ಪಿತು.

ಕಾಲೇಜಿನಲ್ಲಿಯ ವಿದ್ಯಾರ್ಥಿನಿಯರೆಲ್ಲರಿಗೂ ಅನಂತ ಅಣ್ಣಾ ಆಗಿದ್ದ. ಅಭ್ಯಾಸದ ಟಿಪ್ಪಣೆ ಇರಲಿ, ನಾಟಕದ ನೋಟ್ಸ ಇರಲಿ, ವೈಯಕ್ತಿಕ ವಿಚಾರ ವಿರಲಿ, ಎಲ್ಲಕ್ಕೂ ಸಹೋದರಿಯರು ಅನಂತನ ಸಲಹೆಯನ್ನೇ ಪಡೆಯುತ್ತಿ ದ್ದರು. ಅವನ ನಯ-ವಿನಯಪೂರಿತ ಅಲೌಕಿಕ ನಡತೆಯೇ ಅವೆಲ್ಲವುಗಳ ಮೂಲವಾಗಿತ್ತು. ನಿಸ್ಸಹಾಯಕರೂ, ಅಬಲೆಯರೂ ಆದ ಕಾಲೇಜ ಹುಡುಗಿ ಯರಿಗೆ ಅನಂತನೆಂದರೆ ಸಾವಿರ ಸಿಂಹಗಳ ಬಲ! ಭಗಿನೀಪ್ರೇಮದ ಪಾವಿತ್ರ್ಯ ಅನಂತನಲ್ಲಿ ಕಾಣುತ್ತಿತ್ತು.

ಅದೇ ಆನಂತ ಎದ್ದು ಪುಸ್ತಕ ಓದುತ್ತ ಕುಳಿತಿದ್ದ. ಬಾಗಿಲ ಸಪ್ಪಳ ವಾಯಿತು. ಅನಂತ ಬಾಗಿಲ ತೆರೆದ. ಅಂದು ತನ್ನ ಕೈಯಲ್ಲಿ ಕವನ ಕೊಟ್ಟಿದ್ದ ಅದೇ ಆ ಸರೋಜ. ಆಗ ತಾನೇ ಹದಿನೇಳರಲ್ಲಿ ಕಾಲಿಡುತ್ತಿದ್ದಳು ಸರೋಜ. ತುಂಬಿ ಸೂಸುವ ಜವ್ವನ. ತೀರ ಎತ್ತರವಾಗಿರದ ಗಿಡ್ಡವಾಗಿದ್ದ ತಿಳಿಕೆಂಪು ವರ್ಣದ ದೇಹ, ಹಾಲುಗಲ್ಲದ ಮೇಲೆ ಅಲೆದಾಡುತ್ತಿರುವ ಮುಂಗೂ ದಲು, ಹೊಳೆಯುವ ನಯನ, ಮಿಂಚುವ ಕೆಂಪುಟಿ, ಕಳಿಕೊಡುವ ಭ್ರೂಕುಟಿ ಅನಂತನಲ್ಲಿ ಸ್ವಾನುಭವ ಆನಂದ ಹುಟ್ಟಿಸಿದವು. ಅವನು ಉಪ್ಪುಂಡ ಮಾನವ ನಲ್ಲವೆ? ಹೆದರಿದವನಾಗಿ " ಬರ್ರಿ ಬರ್ರಿ " ಎಂದ.

ಅನಂತನಿದ್ದ ಖೋಲಿ ಹಾಗೂ ಅವನ ಮುಖದ ಮೇಲೆ ಮೂಡಿದ ಭಾವನೆಗಳು ಸರೋಜಳಿಗೆ ಅನಂತನ ಸ್ಥಿತಿಯನ್ನು ಅರುಹಿದವು. " ನಾನs ಬರತಿದ್ದೆನಲ್ಲ. ನೀವ್ಯಾಕ ಬಂದಿರಿ ಇಷ್ಟ ದೂರ ? " ಎಂದ ಅನಂತ. " ಏನೂ ಇಲ್ಲ, ಹಾಗೆ ಹಾಸ್ಟೆಲದಿಂದ ಬಂದೆ. ಅಲ್ಲಾ ನಾ ಬರೆದ ಕವನ ಹ್ಯಾಂಗ ಅದ?" ಎಂದಳು ಸರೋಜ. " Beautifull " ಎಂದನು ಅನಂತ. " ಇದನ್ನ ನೋಡ್ರಿ " ಎಂದು ಇನ್ನೊಂದು ಕವನ ಕೊಟ್ಟಳು. ಅನಂತನ ಆನಂದ ಎಲ್ಲೆ ಮೀರಿತು. " ಬರತೀನಾ ಮತ್ತೊಮ್ಮೆ. ಈ ಪತ್ರ ಹಿಡೀರಿ " ಎಂದು ಹೇಳಿ ಸರೋಜ ಹೊರಟು ಹೋದಳು.

ಅನಂತನಿಗೆ ಎಲ್ಲವೂ ವಿಚಿತ್ರವೆನಿಸಿತು. ಬಡತನದ ಬವಣೆಯನ್ನು ಅನು ಭವಿಸಿದ ಸರೋಜಳಿಗಾಗಿ ನೊಂದುಕೊಂಡ. ಆದರೆ ಸದ್ಯ ಸೌಖ್ಯದಿಂದ ಇರುವ ಳೆಂಬುದು ಅಷ್ಟೇ ಆನಂದ ನೀಡಿತು. ತನ್ನನ್ನು ಮದುವೆಯಾಗಲು ಕೇಳಿದ ಮಾತು ಅನಂತನನ್ನು ಮೂಕನನ್ನಾಗಿ ಮಾಡಿತು.

ಒಂದು ದಿನ ಅನಂತನ ಅಧ್ಯಾಪಕರು ಅನಂತನನ್ನು ಮನೆಗೆ ಕರೆದರು. ಅನಂತ ಯಾವದೋ ವಿಷಯದ ಬಗ್ಗೆ ಚರ್ಚೆ ನಡೆಯಬಹುದೆಂದು ಹೋದ. ಕುಶಲ ಪ್ರಶ್ನೆಗಳಾದ ಮೇಲೆ ಅಧ್ಯಾಪಕರು "ಅನಂತ, ನೀನು ಮದುವೆಯ ಬಗ್ಗೆ ವಿಚಾರಿಸಿರುವಿಯಾ?" ಎಂದರು.

" ಯಾರ ಬಗ್ಗೆ ? "

" ನಿನ್ನ ಬಗ್ಗೆ. "

"ನಾನೇ ನಿಲ್ಲುವದೇ ನನಗೆ ಭಾರವಾದಾಗ ಬೇರೊಬ್ಬರನ್ನು ಹೇರಿಕೊಂಡು ನಿಲ್ಲುವದಾದರೂ ಹೇಗೆ?

"ಹೌದು ನಿನ್ನ ಮಾತು ಸತ್ಯವಿದೆ. ಆದರೆ ಈ ಜಗತ್ತಿನಲ್ಲಿ ಭಾರ ಹೊತ್ತು ಬಾಳುವವ ಮಾತ್ರ ಬದುಕಬಹುದು. ಜೀವನಕ್ಕೆ ಆಗುವ ಸಂಸ್ಕಾರಗಳೆಲ್ಲವೂ ಆಗಬೇಡವೇ? ಮದುವೆ ಕೇವಲ ಶಬ್ದ ಸಮುಚ್ಚಾಯವಲ್ಲ, ವಾಕ್ಯ ಸಮ್ಮಿಲನ. ಅಂಜುವವ ಅಳುಕುವವ ಬಾಳಿನಲ್ಲಿ ಬೆಳಗಲಾರ. ಬದುಕೆಂಬುದಕ್ಕೆ ಮುಖಗಳು ಬೇಡವೆ? ನಿನ್ನ ಯಶ ನಿನ್ನ ಪದರಿನಲ್ಲಿ ಇದೆ. ಸರೋಜಳೂ ತಂದೆ-ತಾಯಿ ಇಲ್ಲದ ಪರದೇಶಿ. ಅವಳ ಸೋದರ ಮಾವ ನನ್ನ ಮೇಲೆ ಹೊರೆ ಹೊರಿಸಿದ್ದಾನೆ. ನಿನ್ನ ಬಾಳ್ ಡೋಣಿ ನಡೆಸುವ ಚುಕ್ಕಾಣಿಗಾರಳಾಗಲು ಅವಳು ಯೋಗ್ಯಳಾಗಿದ್ದಾಳೆ, ವಿಚಾರಿಸು." ಎಂದರು.

"ವೇಳೆ ಒದಗಿತೆಂದರೆ, ನಿಮ್ಮಂಥ ಹಿರಿಯರು ಇಚ್ಛಿಸಿದರೆ...."

"ಆ ವೇಳೆ ಬೇಗನೆ ಬರುವಂತೆ ಮಾಡೋಣ."

ಅನಂತ ಖೋಲಿಗೆ ಬಂದನು. ಮನದಲ್ಲಿ ಆನಂದ ನಲಿದಾಡುತ್ತಿತ್ತು. ಕನ್ನಡಿಯ ಮುಂದೆ ನಿಂತು ತನ್ನ ತಾನೇ ನೋಡಿಕೊಂಡನು. "ಹಿರಿಯನಾಗಿದ್ದೇನೆ" ಎಂದುಕೊಂಡ. ಕಾಲೇಜಿನ ಕೆಸರಿನಲ್ಲಿ ಸರೋಜಳೊಂದು ಕಮಲವಾಗಿದ್ದಳು.

ಅನಂತನ ಜೀವನ ಏಳುತ್ತ ಬೀಳುತ್ತ ನಡೆಯಹತ್ತಿತು. ಜ್ಯೂನಿಯರ್ ಪರೀಕ್ಷೆಯೂ ಬಂದಿತು. ಅಭ್ಯಾಸ ಮಾಡಿರದಿದ್ದರೂ ನೆವಕ್ಕಾಗಿ ಪರೀಕ್ಷೆಗೆ ಕೂತ. ರಿಜಲ್ಟು ಕೇಳುವದೇ ಬೇಡ. ಅಭ್ಯಾಸದ ಭಾರ ಸದ್ಯ ಇಳಿಯಿತು.

ಬರೆದ ಕಥೆ ಕವನ ಪುಣೆಗೆ ಕಳಿಸಿದನು. ಹೋಗಲು ಆಗದಿದ್ದಕ್ಕೆ ಕ್ಷಮೆ ಕೋರಿ ಕೈಯೋಲೆಯೊಂದನ್ನು ಕಳಿಸಿದನು. ಸೂಟಿಯ ದಿನಗಳನ್ನು ತಾಯಿ ಊರಿನಲ್ಲಿ ಕಳೆಯಲು ನಿಶ್ಚಯಿಸಿದ.

ಊರಿಗೆ ಹೋಗುವ ಸರ್ವ ಸನ್ನಾಹ ಮಾಡಿದನು. ಆದರೆ ಮತ್ತೆ ಅದೇ ಕಾಟ. ಮೈತುಂಬ ಮುಚ್ಚಲು ಅರಿವೆ ಇಲ್ಲ. ಎದ್ದು ನಿಂತ. ಕೂದಲು ಕೂಡಿಸಲು ಕೊಬ್ಬರಿಯಣ್ಣೆಯಿಲ್ಲ. ಊರಿಗೆ ಹೋಗಬೇಕೆಂದರೆ ಪಾಕೀಟಿನಲ್ಲಿ ಹಣವಿಲ್ಲ. ಇಡೀ ದಿನವೆಲ್ಲ ಊಟವಿಲ್ಲದೇ ಹಾಗೆಯೇ ಇದ್ದ. ಉದ್ವಿಗ್ನತೆಯಲ್ಲಿ ಉದುರಿದ ವಿಚಾರಗಳನ್ನು ಹಾಳೆಯಲ್ಲಿ ಕಲೆಹಾಕುತ್ತ ಕೂತನು.

ಬಾಗಿಲು ಬಡಕೊಂಡವು. ತಾನೇ ಎದ್ದು ಬಾಗಿಲ ತೆರೆದ. ಅಧ್ಯಾಪಕರಿಂದ ಎಲ್ಲವನ್ನೂ ಅರಿತ ಸರೋಜಳಲ್ಲಿ ಯಾವದೋ ಹೊಸ ಕಳೆ ತೇಲುತ್ತಿತ್ತು. ಈ ಸಾರೆ ಅನಂತನಲ್ಲಿ ಬಂದಾಗ ಸ್ತ್ರೀಸಹಜ ಲಜ್ಜೆಯ ಛಾಯೆ ಒಡೆದು ಕಂಡಿತು. ಅನಂತನ ಅಂಗಾಂಗಗಳನ್ನೆಲ್ಲ ಆವರಿಸಿದ ಹೊಸ ಹುಚ್ಚುತನ ಆವಳಲ್ಲಿ ಅಚ್ಚರಿಯನ್ನುಂಟುಮಾಡಿತು. ಅದರ ಸಂಗಡವೇ ಅನಂತನ ಬಗ್ಗೆ ಅಭಿಮಾನ ಆದರಗಳೂ ಸರೋಜಳಲ್ಲಿ ಮೂಡಿದವು. ಅನಂತನ ಸ್ಥಿತಿಯೇ ಅವನ ಜೀವನದ ಕೈಗನ್ನಡಿಯಾಗಿತ್ತು. ಕ್ಷಣಹೊತ್ತು ಇಬ್ಬರೂ ಮೂಕರಾದರು. ಅನ್ಯೋನ್ಯ ಪ್ರೀತಿ ಒಮ್ಮೊಮ್ಮೆ ಮಾತುಗಳನ್ನು ಮೂಕ ಮಾಡುವದು. “ ಸರೋಜಾ, ಮತ್ತೇನಾದರೂ ಬರೆದಿರುವಿ ಏನು ? ಬರೆದರೆ ನನ್ನೂರಿಗೆ ಕಳಿಸು. ನಾನು ನಾಳೇ ಊರಿಗೆ ಹೋಗುತ್ತೇನೆ ” ಎಂದ. ಅವನ ಧ್ವನಿ ಅವನ ಹೃದಯದ ಪ್ರತಿಬಿಂಬವಾಯಿತು. ಅಂದೇ ಮನಿಯಾರ್ಡರ ಬಂದಿದ್ದರಿಂದ ಸರೋಜ ಪರ್ಸಿನಿಂದ ಇಪ್ಪತ್ತೈದು ರೂಪಾಯಿ ತೆಗೆದಿಟ್ಟಳು. ಅನಂತ ಸುಮ್ಮನೇ ಕೂತ. “ ಯಾಕೆ ನನ್ನ ಹಣ ಮುಟ್ಟುವ ಅಧಿಕಾರ ನಿಮಗಿಲ್ಲವೇ ? ” ಎಂದಳು. “ ಇನ್ನೂ ಬಂದಿಲ್ಲ ” ಎಂದನು ಅನಂತ. “ ನನ್ನಾಣೆ ಅದ ತೆಗೆದುಕೊಳ್ಳದಿದ್ರ ” ಎಂದಳು ಸರೋಜ. ನೂರಾರು ರೂಪಾಯಿಗಳನ್ನು ಹೆರವರು ನೀಡಿದಾಗ ಅವುಗಳನ್ನು ಮುಟ್ಟಲೂ ಅಂಜಿದ ಕೈಗಳು ಇಂದು ನೇರವಾಗಿ ರೂಪಾಯಿಗಳನ್ನು ಗಟ್ಟಿಯಾಗಿ ಹಿಡಿದವು. ಅಂದು ಇಂದುಗಳಲ್ಲಿ ಅನಂತ ಅಂತರವಾಗಿದೆ. ‘ ಓಲೆ ಬರೆ ’ ಎಂದಳು. ‘ ಹೂಂ ’ ಎಂಬುದು ಅನಂತನ ಉತ್ತರವಾಯಿತು.

೮

ಅನಂತ ಬಂದಿದ್ದರಿಂದ ವೆಂಕಟರಾಯರಿಗೆ ಆನಂದ ಹೆಚ್ಚಾಯಿತು. ದಮ್ಮಿನ ಬೇನೆ ಸ್ವಲ್ಪ ಗುಣವೂ ಆಯಿತು. “ ಅನಂತಾ, ಬಹಳ ಕಷ್ಟಪಟ್ಟೆಯಂತಲ್ಲೊ ? ” ಎಂದು ಅನ್ನುವಾಗ ರಾಯರ ಕಣ್ಣುಗಳಿಂದ ನೀರು

ಸಾರೋದ್ಧಾರವಾಗಿ ಹರಿಯಿತು. ಮಗನನ್ನು ಅಪ್ಪಿದರು. ತಮ್ಮನ್ನೇ ತಾವು ಶಪಿಸಿಕೊಂಡರು. "ಅನಂತಾ, ಜೀವಾ ಒತ್ತೀ ಇಟ್ಟಾದರೂ ಈ ಸಲ ನಿನಗ ರೂಪಾಯಿ ಕಳಿಸತೇನಪಾ. ಅಭ್ಯಾಸ ಮಾಡು" ಎಂದರು. "ಅಪ್ಪಾ, ನನಗೇನೂ ತ್ರಾಸ ಇದ್ದಿದ್ದಿಲ್ಲ. ಇದ್ರ ನಿಮಗ ಬರೀತಿದ್ದೆ. ದೇವರಃ ಇದ್ದಾನ. ಆತನ ಯಲ್ಲಾ ಮಾಡಸಾವ." ಎಂದ ಅನಂತ. "ಏ, ಅನಂತ ಬಂದಾನ. ದಿನಾ ಎರಡಾಣೆ ಹಾಲು ಹೆಚ್ಚಿಗೆ ತಗೋ" ಎಂದು ಕಮಲಾ ಬಾಯರಿಗೆ ರಾಯರು ಅಂದರು. ಕಮಲಾಬಾಯರು ಸಂತಸದ ನಗೆ ಬೀರುತ್ತ "ಹೂಂ" ಎಂದರು.

ಅನಂತನ ಆಗಮನ ರೈತ ಜನಕ್ಕೆಲ್ಲ ಹಬ್ಬವಾಯಿತು. ಅನಂತನ ಆಧಿಪತ್ಯದಲ್ಲಿ ಇಮ್ಮಡಿ ಮುಮ್ಮಡಿ ಹುರುಪಿನಿಂದ ದುಡಿಯಲು ಕಂಕಣಬದ್ಧ ರಾದರು. 'ವಾಣೀವಿಹಾರ'ದ ಚಟುವಟಿಕೆಗಳು ನವ್ಪೋತ್ಸಾಹದಿಂದ ಬೆಳಗು ತ್ತಿದ್ದವು. ಹೊಸ ಮೆರಗು ಪ್ರಾಪ್ತವಾಯಿತು. ಅಂದು ಅನಂತನಿಂದ ಇಡ ಲ್ಪಟ್ಟ ಜ್ಞಾನ ಜೇನ್‌ಗೂಡ ರಸಬಿಂದುಗಳಿಂದ ತುಂಬಿ ತುಳುಕಹತ್ತಿತು.

ದಿನದಿನವೂ ಅನಂತನಿಗೆ ಕೆಲಸ ಹೆಚ್ಚುತ್ತಲೇ ನಡೆಯಿತು. ಜನರ ವಸತಿಗೃಹಗಳಿಗೆ ಹೋಗಿ ಅವರ ದೈನಂದಿನ ಕಾರ್ಯಗಳನ್ನು ನಿರೀಕ್ಷಿಸಹತ್ತಿ ದನು. ಸಾಮಾನ್ಯ ಜನತೆಯೊಡನೆ ಅವನು ಸಾಮರಸ್ಯ ಹೊಂದಿದನು. ಒಮ್ಮೊಮ್ಮೆ ರೈತರ ಸಂಗಡ ಅವರ ಹೊಲಗಳಿಗೂ ಹೋಗಿಬರುತ್ತಿದ್ದ. ಕೋಲಿಳ್ಳಿಯ ಪ್ರತಿ ಮನೆಯಲ್ಲಿಯೂ ಅನಂತನ ಹೆಸರು ಕೇಳಿಬರಹತ್ತಿತು.

ಅನಂತನ ಕೆಲಸವನ್ನು ಹೀಯಾಳಿಸುವವರೂ ಇದ್ದರು. ಅನಂತನ ಸಲುವಾಗಿ ವೆಂಕಟರಾಯರಿಗೆ ಒಂದಿಲ್ಲ ಒಂದು ಬಗೆಯಿಂದ ತ್ರಾಸುಕೊಡ ಹತ್ತಿದರು. ಅನಂತನ ಜೀವಾಳವಾಗಿದ್ದ ವಾಣೀವಿಹಾರ ಸುಡಲೂ ಯತ್ನಿ ಸಿದರು. ಆದರೆ....?

ಆದರೂ ಅನಂತನಲ್ಲಿ ಎಲ್ಲರ ಬಗ್ಗೆಯೂ ಅಷ್ಟೇ ಸದ್‌ಭಾವನೆ ಇತ್ತು. ಅನಂತನ ಉತ್ತರ ಮಾತುಗಳಲ್ಲಿ ಅಲ್ಲ, ಕೆಲಸಗಳಲ್ಲಿ. ಎಲೆಮರೆಯ ಕಾಯಿ ಯಂತೆ ಮರೆಯಾಗಿ ನಿಂತು ಕಾರ್ಯ ಮಾಡಿಸುತ್ತಿದ್ದ.

ಜನರಲ್ಲಿ ಅಭಿರುಚಿ ಹೆಚ್ಚಿಸಲು ವಾಣೀವಿಹಾರದಲ್ಲಿ ಹೊಸ ಹೊಸ ಹಬ್ಬಗಳನ್ನು ಆಚರಿಸಹತ್ತಿದನು. ಒಂದೊಂದು ದಿನ ಸಂಗೀತ ಸಭೆಗಳನ್ನೂ

ಕರೆಯಹತ್ತಿದ. ನೂಲುವ ರಾಟೆಗಳ ಗುಂಯ್ ಗುಂಯ್ ನಾದ ಹಳ್ಳಿಯ ನ್ನೆಲ್ಲ ಆವರಿಸಿತು. ಯಾರಾದರೂ ಬಂದು ಈ ಸಂಘದ ಮುಖ್ಯಸ್ಥರಾರು ? ಎಂದು ಕೇಳಿದರೆ 'ಜನತೆ' ಎಂದೇ ಅನಂತ ಉತ್ತರಿಸುತ್ತಿದ್ದ.

ಹುಣ್ಣಿವೆ. ಅನಂತ ಮನೆಯಲ್ಲಿಯೇ ಇದ್ದ. ಜನರ ತಂಡ ಮನೆಗೆ ಬಂತು. "ಮಾಸ್ತರ, ಇವತ್ತ ಹುಣ್ಣಿವಿ ಐತಿ ಬ್ಯಾಟಿ ಆಡಾಕ ಹೋಗ ತೀವಿ ಮತ್ತs. ನೀ ಬರತೀ ಇಲ್ಲೋ. ಹೂಂ ಬರಾಕ ಬೇಕು" ಕೂಡಿದವ ರಲ್ಲೊಬ್ಬ ಅಂದ. "ನಾ ಒಲ್ಲೆ ನೀವ ಹೋಗಿ ಬರ್ರಿ" ಎಂದ ಅನಂತ. "ಹೂಂ ಹೂ ಅದು ಆಗಾಕಿಲ್ಲ. ನೀ ಬಿಟ್ರ ನಾವೂ ಬಿಡವ್ರು. ನೀ ಬರಾಕಬೇಕು. ನಾವೇನ ಬಿಟ್ಟು ಹೋಗವರಲ್ಲ ನೋಡು" ಎಂದ ಇನ್ನೊಬ್ಬ. ಜನರ ಪ್ರೇಮಪೂರಿತ ಒತ್ತಾಯ ಅನಂತನನ್ನು 'ಹೂಂ' ಎನ್ನಿಸಿತು.

ಊರಿಂದ ಎರಡು ಮೈಲುಗಳ ಅಂತರದಲ್ಲಿಯೇ ಗುಡ್ಡ. ಬೈಲು ನಾಡಾ ಗಿದ್ದರಿಂದ ಅಲ್ಲೊಂದು ಇಲ್ಲೊಂದು ಗಿಡಗಳ ಗುಂಪು. ಕೆಂಪುಮಣ್ಣಿನ ಗುಡ್ಡ ದಂಚಿನಲ್ಲಿ ಹಚ್ಚ ಹಸಿರಿನಿಂದ ಮೆರೆಯುವ ಹಸಿ ಹುಲ್ಲು. ಹುಲ್ಲುಗಾವಲದಲ್ಲಿ ಮೇಯುತ್ತಿರುವ ದನಗಳ ಹಿಂಡು. ಗುಡ್ಡದ ಮೇಲೆ ಹೋದರೆ ಕಲ್ಲು-ಮಣ್ಣು ಗಳಿಂದ ಸುತ್ತುವರೆದ ಎತ್ತರವಾದ ದಿಬ್ಬ. ಅಲ್ಲಿ ನಿಂತು ನೋಡಿದಾಗ ಮಾತ್ರ ಭಯಾನಕತೆ ಹುಟ್ಟಿಸುವ ಕಂದಕ, ವನ್ಯಮೃಗಳಿಗೆ ಆಶ್ರಯ ಕೊಡುವ ಗಿಡಗಂಟಿ ಕಾಣುತ್ತಿದ್ದವು.

ಆದೇ ಇನ್ನೂ ಸಂಜೆ. ಪಶ್ಚಿಮದಂಚಿನ ಮೂಲೆಯಲ್ಲಿ ರವಿ ಇನ್ನೂ ನಿಂತಿದ್ದಾನೆ. ನೂರಾರು ನಾಯಿಗಳ ಸಂಗಡ ಜನರ ದೊಡ್ಡ ತಂಡವೇ ಹೊರ ಟಿತು. ಎಲ್ಲರ ಕೈಗಳಲ್ಲಿಯೂ ಮಸೆದ ಹಳ್ಳಿಯ ಆಯುಧಗಳು ಮಿಂಚುತ್ತಿದ್ದವು. ದಂಡಯಾತ್ರೆಯೇ ಹೊರಟಿತು.

ಗುಡ್ಡಕ್ಕೆ ಬಂದಾಗ ಆಗಲೇ ಚಂದಿರ ಮೇಲೆ ಬಂದಿದ್ದ. ವನಕುಸುಮ ಗಳ ಪರಿಮಳ ತೇಲಿ ತೇಲಿ ಬರುತ್ತಿತ್ತು. ಬಹುದಿನಗಳಿಂದಿದ್ದ ನೆಮ್ಮದಿ ಕೆಡ ಸಿದ ರೋಷಕ್ಕಾಗಿ ಅಡವಿ ಮೃಗಗಳು ಗುಡುಗು ಹಾಕಹತ್ತಿದವು. ಪ್ರತ್ಯುತ್ತರ ವಾಗಿ ಜನರ ಒದರಾಟ ಚೀರಾಟ ಹೆಚ್ಚಾಗಹತ್ತಿದವು.

ಅನಂತನಿಗೆ ಎಲ್ಲವೂ ಹೊಸದು. ಮೊದಲಿನ ರಭಸ ಕರಗಿತು. ಭಯಾ ನಕತೆ ಜನ್ಮತಾಳಿತು. ಮುಳ್ಳು-ಕಂಟಿಗಳನ್ನು ಲೆಕ್ಕಿಸದೆ, ವನ್ಯಮೃಗಗಳಿಗೆ

ಅಂಜದೆ ಮುನ್ನುಗ್ಗುತ್ತಿರುವ ಜನರ ಮನೋದಾರ್ಢ್ಯ ನೋಡಿ ಅನಂತ ಆಶ್ಚರ್ಯ ಪಟ್ಟ. ಅನಂತನನ್ನು ಕಾಯಲು ಗಟ್ಟಿಗರಾದವರಲ್ಲೊಬ್ಬ ನಿಂತಿದ್ದ. ಬೇಟೆಯ ಕಥೆಯನ್ನೆಲ್ಲ ಅನಂತನಿಗೆ ಆತ ವಿವರಿಸುತ್ತಿದ್ದ.

ಒಮ್ಮೆಲೇ ಎಲ್ಲಿಯೋ ದೂರದಲ್ಲಿ ನಾಯಿಗಳ ಒದರಾಟ ಕೇಳಿಸಿತು. ಅನಂತ 'ಏನು' ಎಂದು ಕೇಳುವಾಗಲೇ "ಹೂಂ ಹಾಕು ಚುಚ್ಛೊ, ಎಲೆ ಅತ್ತಾಗ ಓಡೋ, ಏ ಹೂಂ ವಗಿ. ಹೌದ ಹೌದು ಅಲ್ಲೆ ಆಯತಲೆ. ಏ ನಿಮಾಪನ ಹೋತ ನೋಡ ಅತ್ತಾಗ ಹನಮಪ್ಪನ ಕಡೆ" ಎಂಬ ಸಪ್ಪಳ ಕೇಳಹತ್ತಿತು. ಓದಿದ್ದ ಶಬರಶಂಕರವಿಲಾಸ ಅನಂತನಿಗೆ ನೆನಪಾಯಿತು. 'ಯಪ್ಪಾ' ಎಂಬ ದೈತ್ಯನ ಧ್ವನಿ ಕೇಳಿಸಿತು. ಅನಂತನ ಜೀವನಾಡಿಗಳೇ ಮಂದವಾದವು. 'ಹಾಕ ವಕನ ಸೀ, ಓಡ ಅತ್ತಾಗ' ಎಂಬ ಮಾತು ಪುನಃ ಕೇಳಿದವು. ಅನಂತನ ಮೈಮೇಲೆ ಏರಿ ಬಂದಂತಾಯಿತು. 'ಬ್ಯಾಟಿ ಸಿಕ್ಕಂಗ ಆತ ಮಾಸ್ತರ' ಎಂದ ಮಗ್ಗಲದಲ್ಲಿ ನಿಂತವ. ಪುನಃ ಸಪ್ಪಳ ಎಷ್ಟೋ ಮೈಲು ದೂರ ಹೋದಂತಾಯಿತು. 'ಏ ಮಾಸ್ತರೆ, ಬ್ಯಾಟಿ ತಪ್ಪಿಸಿಗೊಂಡ್ಹೋತು ನೋಡು' ಎಂದ ಅದೇ ಮನುಷ್ಯ. 'ಇನ್ನೆಷ್ಟೊತ್ತೋ ಹನಮಪ್ಪಾ' ಎಂದ ಅನಂತ. ಅನ್ನುವ ಮೊದಲೇ ಜನದ ತಂಡ ಅನಂತನ ಕಡೆಗೆ ಧಾವಿಸಿತು. ಅನಂತ ಗಾಬರಿಯಾದ. 'ಛೀ ನಿಮ, ಇಟ್ಟಕ್ಕ ಹಿಂಗ ಮಾಡಿದ್ರ ಹ್ಯಾಂಗೊ ಮಾರಾಯ' ಎಂದ ಹನಮಪ್ಪ. ಒಂದು ಕ್ಷಣ ಸದ್ದೆಲ್ಲ ಅಡಗಿತು. ಒಮ್ಮೆಲೇ ಮರುಕ್ಷಣದಲ್ಲಿ ಮುಗಿಲು ಬಿರಿಯುವಂತೆ ಜನರ ಒದರಾಟ ಕೇಳಿತು. ಅನಂತ 'ಏನು' ಎಂದ. 'ಬ್ಯಾಟಿ, ಬ್ಯಾಟಿ' ಎಂದು ಉತ್ತರ ಬಂದಿತು. ಸತ್ತು ಬಿದ್ದ ಹೊನಗ್ಯಾ ನೋಡಿ ಅನಂತ ಬೆಚ್ಚಿಬಿದ್ದ. ಅಂತೂ ಬ್ಯಾಟೆಯ ನಾಂದಿ ಮಂಗಳಗಳೆರಡು ಸಮಾಪ್ತಗೊಂಡವು.

ಹಿಲಾಲುಗಳ ಬೆಳಕಿನಲ್ಲಿ ಮೆರವಣಿಗೆ ಊರಲ್ಲಿ ಹೊರಟಿತು. ಕೂಡಿದ ಜನರ ಆನಂದ ಚರಮಸೀಮೆ ಮುಟ್ಟಿತು. ಹನುಮಪ್ಪನನ್ನು ಮಲ್ಲಪ್ಪ, ಅಬ್ದುಲ್ಲ ನನ್ನು ಬಸವಂತ, ಭೀಮಪ್ಪನನ್ನು ರಾಮಣ್ಣ, ಸ್ತುತಿಸುವ ಭಟ್ಟಂಗಿತನದ ಸೊಬಗು ಊರನ್ನೆಲ್ಲ ವ್ಯಾಪಿಸಿತು.

ಕಾಲೇಜಿನ ಕ್ಲಾಸುಗಳು ಆರಂಭವಾಗಿ ಆಗಲೇ ಮೂರು ದಿನ ಗತಿಸಿದ್ದವು. ಬೇಗನೇ ಬರಲು ಸರೋಜಳಿಂದ ಓಲೆಯೂ ಬಂದಿತ್ತು. ರಾಯರು

ಎಷ್ಟೇ ಪ್ರಯತ್ನ ಮಾಡಿದ್ದರೂ ಕೈಗಡ ಇನ್ನೂ ದೊರೆತಿದ್ದಿಲ್ಲ. ಧಾರವಾಡಕ್ಕೆ ಹಾರಲು ಅನಂತ ಕಾತರಿಸುತ್ತಲೇ ಇದ್ದ.

'ಯಪ್ಪಾ' ಎಂದು ಯಾರೋ ಒದರಿದರು. ಕಮಲಾಬಾಯರು ಬಾಗಿಲು ತೆರೆದರು. ಬಂದವ ಮಲ್ಲಾಪುರದ ರೈತ ಮುದುಕಪ್ಪ. "ಮುದುಕಪ್ಪ ರೊಟ್ಟೀ ತಿನ್ನೇಳ" ಎಂದರು ಕಮಲಾಬಾಯರು. "ಯವ್ವಾ ಬುತ್ತಿ ತಿಂದಃ ಬಂದಿನಿ" ಎಂದ ಮುದುಕಪ್ಪ. "ಯಾಕಪಾ ಬಂದಿದ್ದಿ" ಎಂದು ಕೇಳಿದರು ರಾಯರು. "ಮತ್ತ ಮಾರಾಯ ನಿಂತಿತ್ತಲ್ಲ ನಿನ್ನ ಹೋದ ವರಸದ ಎರಡುನೂರು ಬಾಕಿ. ಈ ವರಸ ಓಟು ದೇವರು ಬೇಸಿ ಕೊಟ್ಟನು. ಮತ್ತರಃ ಯಾಕ, ಸಾಲಾ ಹರವ ಬಿಡೋಣ ಅಂತ ಬಂದೆ" ಎಂದ ಮುದಕಪ್ಪ.

ಬಂದ ರೂಪಾಯಿಗಳಲ್ಲಿ ಐವತ್ತು ರೂಪಾಯಿ ಅನಂತನ ಪಾಲಿಗೆ ದೊರೆತವು. ಊರಿಗೆ ಹೋಗುವ ಮುನ್ನ ವಾಣೀವಿಹಾರಕ್ಕೆ ಹೋಗಿ ಜನರಿಗೆ ಸೂಕ್ತ ಸಲಹೆ ನೀಡಿದನು. "ನೋಡ್ರಿ, ಶಾಲೆಯನ್ನು ಕಾಯೋದು ಕಳ್ಕೋದು ನಿಮ್ಮ ಕೈಯಾಗ ಐತಿ" ಎಂದ ಅನಂತ. "ಏ ಮಾಸ್ತರ, ನಾವೇನು ಪಳ್ಳ ಮಂದಿ ಅಲ್ಲಾ, ಹಿಡದ ಕೆಲಸಾ ಬಿಡಾವರಲ್ಲ. ನೀ ಇಲ್ಲದ ಆದ್ಯಾಂಗ ನಾವ ಮಾಡೋದು ? ಬರತೀ ಅಲ್ಲ ಮತ್ತ" ಎಂದು ಹಿರಿ ರೈತ ಕನಕಪ್ಪ ಅಂದ.

ಪ್ರತಿಸಾರೆ ಹೋಗುವ ಹುಮ್ಮಸ್ಸು ಮಾತ್ರ ಅನಂತನಿಗೆ ಈ ಸಲ ಇರಲಿಲ್ಲ. ಅನಂತನ ಕಾಲುಗಳು ಬೇಗನೇ ಏಳದಾದವು. ತಂದೆಗೆ ನಮಸ್ಕಾರ ಮಾಡುವಾಗ ಕಣ್ಣೀರುಗಳು ಕಾಲುಗಳ ಮೇಲೆ ಬಿದ್ದವು. ರಾಯರ ಕಣ್ಣುಗಳಲ್ಲಿಯೂ ಹನಿ ಕಂಡವು. "ನಾ ಹೋಗಿ ಬರತೀನಿ ಮಲ್ಲಪ್ಪ, ಮುದಕಪ್ಪ" ಎಂದ. "ಬಾ ಹೋಗು ಮಾರಾಯ, ಪರೀಕ್ಷಾ ಪಾಸ ಮಾಡೇ ಬಾ" ಎಂದರು ಕೂಡಿದ ಜನ.

೯

ಚಾತಕದಂತೆ ಅನಂತನ ಬರುವನ್ನೇ ನಿರೀಕ್ಷಿಸುತ್ತಿದ್ದ ಸರೋಜಳಿಗೆ ಅನಂತನ ಆಗಮನವು ಬಂಗಾರದ ಸಮಯವಾಯಿತು. ಅನಂತನ ಅಪರೋಕ್ಷದಲ್ಲಿ ಸಾಂಗೋಪಾಂಗವಾಗಿದ್ದ ಸಂಗತಿಗಳನ್ನೆಲ್ಲ ವಿವರಿಸಿದಳು. ಹೊಸದಾಗಿ ರಚಿಸಿದ 'ಜೀವನ' ಎಂಬ ಕವನವನ್ನು ಕೈಗಿತ್ತಳು.

ಈ ಸಲ ಮುಕ್ಕಾಲು ಮಾಫಿ ಆಗಿದ್ದರಿಂದ ಕಾಲೇಜಿನ 'ಫೀ' ಕಾಟ ಅಷ್ಟು ಇರಲಿಲ್ಲ. ವಿಶ್ವವಿದ್ಯಾಲಯದ ಪರೀಕ್ಷೆಯಿರುವದರಿಂದ ಓದಲವಶ್ಯವಾದ ಕೆಲವು ಟೆಕ್ಸ್ಟ್ ಪುಸ್ತಕಗಳನ್ನು ಕೊಂಡ. ಇರುವದು ಮಾತ್ರ ಮೊದಲಿನ ಖೋಲಿಯಲ್ಲಿಯೇ.

ಅಭ್ಯಾಸ ಅಡೆತಡೆಗಳಿಲ್ಲದೇ ನಡೆಯಹತ್ತಿತು. ಕೆಲ ದಿನದ ಮಟ್ಟಿಗೆ ಕಥೆ–ಕಾದಂಬರಿ ಬರೆಯುವದನ್ನು ಬಿಟ್ಟ. ಭವಿಷ್ಯತ್ತಿನ ರೂಪ ನಿರ್ದೇಶಿಸುವ ಅಭ್ಯಾಸ ಹೆಚ್ಚಿಸಲು ಹಟ ತೊಟ್ಟ. ಮುಂಜಾನಿಸಿಂದ ಸಂಜೆಯ ವರೆಗೂ ಕಾಲೇಜಿನ ಲಾಯಬ್ರರಿಯಲ್ಲಿಯೇ ವೇಳೆ ಕಳೆಯಹತ್ತಿದ. ವಿಶ್ವವಿದ್ಯಾಲಯಕ್ಕೆ ಈ ಸಾರೆ ಅನಂತನದೇ ನಂಬರು ಎಂದು ಸಹಪಾಠಿಗಳು, ಅಧ್ಯಾಪಕರು ಅನ್ನಹತ್ತಿದರು.

ತುಸು ದಿನಗಳಲ್ಲಿಯೇ ಕೋಲಳ್ಳಿಯಲ್ಲಿ ಕಮಲಾಬಾಯರಿಗೆ ಜಡ್ಡಾಗಿದೆ ಎಂದು ಓಲೆ ಬಂದದ್ದರಿಂದ ಎರಡು ದಿನ ಹೋಗಿಯೂ ಬರಬೇಕಾಯಿತು.

ಆಗಲೇ ಕ್ರೂರ ವಿಧಿ ತನ್ನ ಆಟ ನಡೆಸಿತ್ತು. ಬಂದವನೇ ಖೋಲಿಯನ್ನು ನೋಡಿದ. ಎಲ್ಲವೂ ಅಸ್ತವ್ಯಸ್ತವಾಗಿತ್ತು. ಗಾಬರಿಯಾದ. ಬ್ಯಾಗು ತೆಗೆದು ಪರ್ಸು ನೋಡಿದ, ಅದರಲ್ಲೇನು ? ಹೊಸದಾಗಿ ಕೊಂಡಿಟ್ಟಿದ್ದ ಬಟ್ಟೆಗಳನ್ನು ನೋಡಿದ. ಅವೂ ಮಾಯವಾಗಿದ್ದವು. ಗೆಳೆಯ ಕೊಟ್ಟಿದ್ದ ಪಾರ್ಕರ್ ಪೆನ್ನು, ಪಕ್ಕದ ಮನೆಯವರಿಂದ ತೆಗೆದುಕೊಂಡು ಬಂದಿದ್ದ ಟಾಯಿಮ್‌ಪೀಸು ಎಲ್ಲವೂ ಹೋಗಿದ್ದವು. ಪಕ್ಕದ ಮನೆಯವರನ್ನು ಕೇಳಿದ. "ಹೌದಪಾ, ನಿನ್ನೆ ಏನಃ ಮನ್ನೆ ನಿನ್ನ ಖೋಲ್ಯಾಗ ಸಪ್ಪಳ ಆತು, ನೀನ ಬಂದೀ ಅಂತ ತಿಳಕೊಂಡಿದ್ವೆಪಾ. ಪಾಪ, ಕಳುವಾತೇನು ?" ಎಂದರು. ಅನಂತನಿಗೆ

ಮುಗಿಲೇ ಕಡಕೊಂಡು ಬಿದ್ದಂತಾಯಿತು. ಅಟ್ಟಹಾಸದಿಂದ ಸಾಗುತ್ತಿದ್ದ ಅನಂತನ ಜೀವನವು ವಿಧಿಗೆ ಸಹನವಾಗಿರಲಿಕ್ಕಿಲ್ಲ! ನಿಸ್ಸಹಾಯಕನಾದನು. ಹೃದಯದಲ್ಲಿ ತುಂಬಿ ಬರುವ ಸಂತಾಪವನ್ನು ಸಹಿಸಿದನು. 'ಮುಂದೇನು?' ಎಂಬ ವಿಚಾರದಲ್ಲಿಯೇ ಕುಳಿತನು. "ಯಾಕೋ ಅನಂತ, ಏನಿದು ಹೀಂಗ್ಯಾಕ ಕೂತಿ" ಎಂದು ಬಂದ ಗೆಳೆಯ ಮುರಲಿ ಅಂದ. ನಡೆದದ್ದನ್ನೆಲ್ಲ ನೇರವಾಗಿ ಅನಂತ ವಿವರಿಸಿದ. ಅನಂತನ ಅವಸ್ಥೆಗೆ ಮುರಲಿಯೂ ಮರುಗಿದ. "ಅನಂತಾ ಪೋಲೀಸ ಕಚೇರಿಗೆ ಹೋಗಿ ಕಂಪ್ಲೇಂಟ ಕೊಟ್ಟು ಬರೋಣ" ಎಂದ. "ಮುರಲಿ, ಮತ್ತs ಅದೊಂದು ತ್ರಾಸು, ಅವರೇನೂ ಹುಡುಕೂದಿಲ್ಲ. ನನ್ನ ಸಾಮಾನೇನೂ ಸಿಗೋದಿಲ್ಲ. ಕಚೇರಿಗೆ ಮಾತ್ರ ಎರಡಕ್ಕ ಮೂರಕ್ಕ ಅಡ್ಡಾಡೋದು ತಪ್ಪಂಗಿಲ್ಲ. ಹಾಂಗ ದೇವರ ಮನಸಿನ್ಯಾಗ ನನ್ನ ಸಾಮಾನ ಕೊಡಸಬೇಕಂತ ಇದ್ರ ಕಳವs ಮಾಡಸತಿದ್ದಿಲ್ಲ. ಏನೂ ಬ್ಯಾಡ, ಬಂದದ್ದನ್ನ ಅನುಭವಿಸಬೇಕು" ಎಂದ ಅನಂತ. ಆದರೂ ಮುರಲಿ ಕೇಳಲಿಲ್ಲ.

ಪರೀಕ್ಷೆ ಪಾಸಾಗಲೇಬೇಕೆಂಬ ಆಶೆ ಎಲ್ಲವನ್ನೂ ಪೂರೈಸಿತು. ಸರೋಜಳ ಸಹಾಯವು ಕಳವಳವನ್ನು ಕಡಿಮೆ ಮಾಡಿತು. ಬಂದದ್ದೆಲ್ಲವನ್ನೂ ಸಹಿಸುವ ಶಾಂತಗುಣವು ಮುನ್ನಡೆಯುವ ಮಾರ್ಗದ ದಾರಿದೀಪವಾಯಿತು.

ಹಿಂದಕ್ಕೆ ತಾನೇ ಪ್ರಕಟಿಸಬೇಕೆಂದು ಬರೆದಿಟ್ಟ ಕಾದಂಬರಿಯನ್ನು ತೆಗೆದುಕೊಂಡು "ಜ್ಞಾನವರ್ಧಕ ಗ್ರಂಥಮಾಲೆ"ಗೆ ನಡೆದ. "ನಮಸ್ಕಾರ್" ಎಂದ. "ಹೂಂ ಯಾರವರು? ಬರ್ರಿ ಬರ್ರಿ ಯಾಕs ಚಂದಾದಾರ ಆಗತೀರೇನು?" ಎಂದರು ಮಾಲಕರು. "ಇಲ್ಲ ನನ್ನ ಹೆಸರು ಅನಂತ. ಈ ಕಾದಂಬರಿ ನಾನs ಬರದೀನಿ ತಮ್ಮಲ್ಲೇ ಪ್ರಕಟಿಸುತ್ತಿದ್ದರ...."

"ಓಹೊ ಅನಂತ ಅಂದರ ನೀವ ಏನು? ಪೇಪರದಾಗ ನೋಡೀನಿ ನಿಮ್ಮ ಹೆಸರು. ಚಿಕ್ಕ ವಯಸ್ಸಿನ್ಯಾಗ ಛಲೋ ಸಾಧಿಸೀರಾ ಕಲೀನ" ಎಂದರು.

"ಏನೋ ಪ್ರಯತ್ನ."

"ಯಾಕ ಬಹಳ ಛಲೋ ಬರದೀರಲ್ಲ? ಆದರೂ ಇನ್ನೂ ಸ್ವಲ್ಪ ದುಡೀಬೇಕು."

“ ಅಲ್ಲಾ ಮತ್ತ ಈ ಕಾದಂಬರಿ ಇಷ್ಟು ನೋಡತೀರೇನು. ನನಗ ಬಿ.ಎ. ಅಭ್ಯಾಸ ಅದ, ಅದಕ್ಕ ಪ್ರಕಟನೆಗೆ ಆವಶ್ಯವಿದ್ದರ ನೋಡ್ರಿ. ”

“ ಹೌದಲ್ಲ, ಇಷ್ಟೇನ ಬಿಡ್ರಿ ನೀವ ಬರದೀರಿ ಅಂದ್ರ ಪ್ರಕಟನೆ ಮಾಡ ಬಹುದು. ಆದರೂ ನೋಡ್ರಿ ಒಮ್ಮೆಲೆ ಹಾಂಗ ಕಾದಂಬರಿ ಬರೀಬಾರದು. ತಪ್ಪು ತಿಳಿದುಕೊಳ್ಳಬ್ಯಾಡ್ರಿ ಮತ್ತ. ಅಲ್ಲ ನೀವು ಹಾರ್ಡಿ, ರಾಬರ್ಟಸನ್, ಶೇಕ್ಸಪೀಯರ, ಮಾಮ, ಪರ್ಲಬಕ್, ಆಯರ್ವಿಂಗ ಸ್ಟೋನ, ರೋಮಿಯೋ ರೊಲ್ಯಾಂಡ ಈ ಇಂಗ್ಲೀಷ ಜನರ ಕಾದಂಬರಿ ಓದೀರಿಲ್ಲೊ ? ಮತ್ತ ಕನ್ನಡ ದಾಗ ಯಾರವು ಓದೀರಿ ? ಹಿಂದೀ ಮರಾಠೀ ಏನಾದರೂ ನೋಡೀರೇನು ? ” ಎಂಬ ಪರೀಕ್ಷೆಯನ್ನೇ ನಡೆಸಿದರು ಮಾಲಕರು.

“ ಇಲ್ಲ ಸ್ವಾಮಿ, ಏನೋ ನೂರಾರು ಇಂಗ್ಲಿಷ ಲೇಖಕರನ್ನು ಬಲ್ಲೆ, ವಿವಿಧ ಸಾಹಿತ್ಯವನ್ನೂ ಓದಿದ್ದೇನೆ. ಇದೇ ನನ್ನ ಪ್ರಥಮ ಕಾದಂಬರಿ. ತಾವು ಗೌರವ ಧನ ಏನು ಕೊಡುತ್ತೀರಿ ! ”

“ ಅದರ ವಿಚಾರ ಆ ಮೇಲೆ ತಿಳಿಸಬಹುದು. ನಮ್ಮ ಸಲಹೆಗಾರ ಮಂಡಳದವರು ಒಪ್ಪಿದ ಮೇಲೆ ನೋಡೋಣ. ”

ಅನಂತನಿಗೆ ಸಿಟ್ಟು ಉಕ್ಕೇರಿ ಬಂತು. ಆದರೆ ಶಾಂತಿಯು ಬಾಳಿನ ತಳಹದಿಯಾಗಿರಬೇಕು ಎಂದು ತಾಯಿ ಹೇಳಿದ ಮಾತು ನೆನಪಾಗಿದ್ದರಿಂದ “ ಕ್ಷಮಿಸಿ ” ಎಂದು ತನ್ನ ಕಾದಂಬರಿಯನ್ನು ತೆಗೆದುಕೊಂಡು ಮನೆಗೆ ಮರಳಿ ಬಂದನು.

ನೂರಾರು ಹೆಸರುಗಳಿಂದ ಹಲವಾರು ಕಾದಂಬರಿಗಳ ವಿಮರ್ಶೆ ಮಾಡಿ ದವ ಅನಂತನೆಂಬುದು ಆ ಒಡೆಯರಿಗೇನು ಗೊತ್ತು ? ಆಂಗ್ಲ ಕಾದಂಬರಿ ಕಾರರ ಬಗ್ಗೆ ಚಿಕ್ಕ ಹೊತ್ತಿಗೆಯೊಂದನ್ನು ಕೂಡ ಅನಂತನು ಬರೆದಿಟ್ಟಿದ್ದಾನೆಂಬು ದನ್ನು ಸಂಪಾದಕರು ಕಲ್ಪಿಸಲು ಸಾಧ್ಯವಿಲ್ಲ.

ಮುಕ್ಕಾಲು ಮಾಫಿಯಾಗಿದ್ದರೂ ಉಳಿದ ಹಣಕಟ್ಟಬೇಡವೆ ? ಗೆಳೆಯರ ಕೈಗಡ ಪರ್ವತದಂತೆ ನಿಂತಿತ್ತು. ಊರಿಗೆ ಪತ್ರ ಹಾಕಬೇಕಂದರೆ ತಾಯಿಯ ಆರೋಗ್ಯಕ್ಕಾಗಿ ಹಾವೇರಿಯಲ್ಲಿ ಹೇರಳ ಹಣ ವೆಚ್ಚವಾಗಿದೆ. ಸರೋಜಳೇ ? ಅವಳೂ ವಿದ್ಯಾರ್ಥಿನಿ. ವಿಮಲೆಗೆ ಓಲೆ ಬರೆಯಬೇಕಂದರೆ ಸ್ವಾಭಿಮಾನ ಒಗ್ಗಲಿಲ್ಲ. ವಿಚಾರದ ಉಯ್ಯಾಲೆಯಲ್ಲಿ ತೂಗಾಡಹತ್ತಿದನು.

"ರಾಯರ, ಪತ್ರ ಆದ" ಎಂದು ಒದರಿ ರಾಮಣ್ಣಾ ಪತ್ರ ಕೊಟ್ಟು ಹೋದ. ಅನಂತ ಓಲೆ ಬಿಚ್ಚಿದ. ಮನವು ಹಿಗ್ಗಿತು. ವಿಮಲೆಯೂ ಕರಂದೀಕರರೂ ಬರೆದ ಪತ್ರ. ಕ್ಷಣ ಹೊತ್ತು ಅನಂತನಿಗೆ ಆ ಪತ್ರ ಮನಕ್ಕೆ ಸಮಾಧಾನ ನೀಡಿತು. ವಿಮಲೆಯ ಲಗ್ನಕ್ಕೆ ಹೋಗಲು ನಿಶ್ಚಯಿಸಿದನು. ಕಲೆಕ್ಟರನೊಂದಿಗೆ ನಿಶ್ಚಯವಾದ ವಿಮಲೆಯೇ ಧನ್ಯಳೆಂದುಕೊಂಡ. ಆದರೆ ಪುಣೆಗೆ ಹೋಗಿ ಮದುವೆಯ ಸಂಭ್ರಮ ಸವಿಯಬೇಕೆಂದರೆ ಜೇಬಿನ ಪರವಾನಿಗೆ ಇರಲಿಲ್ಲ.

ಊರಲ್ಲಿ ಅಡ್ಡಾಡಿಕೊಂಡಾದರೂ ಬರೋಣವೆಂದು ಹೊರಟ. ದಾರಿಯಲ್ಲಿ ಕಾಲೇಜಿನ ಗೆಳೆಯನೊಬ್ಬ ಕೂಡಿದ. ಅವನ ಬಲುಮೆಗೆ ಬಲಿಯಾಗಿ ಅನಂತ ಚಹಾದ ಅಂಗಡಿ ಸೇರಬೇಕಾಯಿತು. ತಿಂಡಿ–ತಿನಸು ಮುಗಿದು ಬಿಳಿಬತ್ತಿ ಸೇದಹತ್ತಿದರು. "ಅನಂತಾ, ಕ್ಷಮಿಸುತ್ತೇನೆ ಅಂದ್ರೆ ಒಂದು ಸುದ್ದಿ ಹೇಳತೀನಿ. ಮತ್ತ ಆ ಸುದ್ದಿ ನಿಜವಾದದ್ದೇ" ಅಂದ. "ಆದಕ್ಕೇನೋ ಕುಲಕರ್ಣೀ, ನೀ ಇನ್ನೂ ನನ್ನ ತಿಳಕೊಂಡಿಲ್ಲ ಬಿಡು. ಬೇಕಾದದ್ದು ಇರಲಿ ಹೇಳು" ಎಂದ ಅನಂತ. "ಅಲ್ಲೋ, ಏನ ಅಗದಿ ಸರೋಜಾ ಅಂದ್ರ ದೇವತೆ ಅಂದಿದ್ದಿ. ಆ ಮಾತು ಸುಳ್ಳು ನೋಡು. ವಯಸ್ಸಾತೂ ಅಂದ್ರ ಹೆಣ್ಣು ಕೆಡತಾವ. ಹಿರೇರು ಆದಕ್ಕ ಅಂತಾರ ನೋಡು ಹೆಂಣಿನ ನೆಲಿ ತಿಳಿಯೂದಿಲ್ಲಾ ಅಂತ. ಅಲ್ಲೋ, ನಿನ್ನೆ ಆ ನಿಮ್ಮ ಸಿಗ್ಗಾವಿ ಇದ್ದಾನಲ್ಲಾ ಅವನ ಜೋಡಿ ಏನಪಾ....ಒಲ್ಲೆ ಮಾರಾಯಾ ಮುಂದ ಹೇಳ್ಲಿಕ್ಕ ಹೆದರಿಕೆ ಬರತದ. ನಮಗ್ಯಾಕ ಮುಂದೀದು" ಎಂದು ಸುಮ್ಮನಾದ. "ಏನಾತು, ಹೇಳಿರಹೇಳೋ" ಎಂದ ಅನಂತ. "ಬ್ಯಾಡ ಮಾರಾಯ, ನನಗ ಗೊತ್ತಿಲ್ಲ ಆತಿಲ್ಲೊ" ಎಂದ. "ಹೌದೋ ಕುಲಕರ್ಣಿ, ನನಗ ಎಂದೋ ಗೊತ್ತಿತ್ತು ಇದು. ಸರೋಜಳ ಮ್ಯಾಲೆ ಸಂಶಯ ಬಂದಿತ್ತು ನನಗ" ಎಂದ ಅನಂತ. ಅನಂತನ ಬಲೆಯ ಆಳವನ್ನರಿಯದೆ ಕುಲಕರ್ಣಿ "ಅನಂತಾ, ನಿನ್ನೆ ಇಬ್ಬರೂ ಸಿನೇಮಾಕ್ಕ ಹೋಗಿದ್ದರು. ಫೋಟೋ ಆಗೇದ. ಇಷ್ಟ ಅಲ್ಲ, ಆ ದುಡ್ಡಿದ್ದ ಸಿಗ್ಗಾವಿನ್ನ ಮದಿವೀ ಮಾಡಿಕೋತೀನಿ ಅಂತ ಪ್ರಾಮೀಜ ಮಾಡ್ಯಾಳಂತ" ಎಂದ. ಇನ್ನೊಂದು ಸಿಗರೇಟು ಹೊತ್ತಿಸಿ ಇಬ್ಬರೂ ನಡೆದರು.

ನೀರಡಿಸಿ ನದಿಗೆ ಹೋದರೆ ನೀರು ಬತ್ತುವದಂತೆ. ಅನಂತನ ತಲೆ

ಕಾಯಿತು. ಹೃದಯ ಭಾರವಾಯಿತು. ಕಾಲು ಎಳೆಯುತ್ತ ಕೋಣೆಯ ಕಡೆಗೆ ನಡೆದನು. ದಾರಿಯಲ್ಲಿ ಕಣ್ಣಿಗೆ ಕಾಣದೇ ಉಳಿದಿದ್ದ ಒಂದಾಣೆ ಜೇಬಿನ ಮೂಲೆಯಲ್ಲಿ ಸಿಕ್ಕಿತು. ವರ್ತಮಾನಪತ್ರ ಮಾರುವ ಹುಡುಗನನ್ನು ಒದರಿ 'ಫ್ರೀಪ್ರೆಸ್' ಕೊಂಡ. ಪುಟ ತಿರುವುತ್ತ ರೂಮಿಗೆ ಬಂದ.

ಜಾಹೀರಾತಿನ ಪುಟದ ಮೇಲೆ ದೃಷ್ಟಿ ಓಡಿತು. "ಹೈದ್ರಾಬಾದ ಸ್ಟೇಟಿನಲ್ಲಿ ಪೋಲೀಸ ಸಬ್ಇನಸ್ಪೆಕ್ಟರ್ ಸ್ಥಳಗಳನ್ನು ತುಂಬುವದಿದೆ." ಎಂಬ ನೋಟೀಸನ್ನು ಓದಿ ಅಪರಿಮಿತ ಆನಂದಪಡೆದನು. ಕೂಡಲೇ ಒಂದು ಬಿಳಿ ಹಾಳೆ ಹರಿದು ಅರ್ಜಿ ಬರೆದು ಅಂಚೆಗೆ ಹಾಕಿಯೇ ಬಂದ. ಇದೆಲ್ಲವೂ ಗುಪ್ತ ವಾಗಿಯೇ ನಡೆಯಿತು.

ಸರೋಜಳ ಬಗ್ಗೆ ಸಾವಿರ ವಿಚಾರ ತರಂಗ ತರಂಗವಾಗಿ ತಲೆಯಲ್ಲಿ ಏಳಹತ್ತಿದವು. "ಛೀ, ನಾನು ಪಾಪಿ. ಪಾವನೆಯಾದ ಸರೋಜಳ ಬಗ್ಗೆ ಎಂಥ ದುರ್ವಿಚಾರ" ಎಂದು ಒಮ್ಮೆ ಅನ್ನುವ. ಪುನಃ ಅರೆನಿಮಿಷದಲ್ಲಿ "ಹೌದು ಅದಕ್ಕೇ ಎಂಟು ಹತ್ತು ದಿನಾ ಆತು ನನ್ನ ಭೆಟ್ಟಿಯಾಗಿಲ್ಲ. ಇಲ್ಲಿಲ್ಲ, ಕುಲ ಕರ್ಣಿ ಮಾತು ನಿಜವಿರಬೇಕು" ಎಂಬ ನಿರ್ಧಾರ ಕೈಕೊಳ್ಳುವ. "ಯಾಕ, ಏನ ತಪ್ಪ ಅದ. ಅವ ಸಾವಕಾರ ಇದ್ದಾನ, ಆಕೀ ಮನಸ ಬಂದಿದ್ದೀತು ಹೊಂ ಅಂದಿರಬಹುದು" ಎಂಬ ವಿಚಾರ ಮೂಡುನಾಗಲೇ "ಸ್ತ್ರೀ ಜೀವನ ಮೋಸದ ಮೂರ್ತಿ" ಎಂಬ ವಿಚಾರ ಏಳುವದು. "ನಾನೇಕೆ ಮಿಡುಕಬೇಕು? ಅವಳ ವಿಚಾರ ನನಗೇಕೆ? ಎಲ್ಲಕ್ಕೂ ಅವಳು ಸ್ವತಂತ್ರಳು" ಎಂಬ ನಿರ್ಧಾರ ಮಾಡಿ ಮಲಗಿದನು.

ಎಂಟು ಹತ್ತು ದಿನಗಳಿಂದ ಕಾಲೇಜಿಗೆ ಹೋಗುವದನ್ನು ಬಿಟ್ಟು ಮನೆ ಯಲ್ಲಿಯೇ ಅನಂತ ಅಭ್ಯಾಸ ನಡೆಸಿದ್ದ. ಅಷ್ಟರಲ್ಲಿ ಪುಣೆಗೆ ಹೊರಟು ಬರಲು ಗಾಡಿ ವೆಚ್ಚಕ್ಕಾಗಿ ಐವತ್ತು ರೂಪಾಯಿ ವಿಮಲೆಯಿಂದ ಮನಿ ಆರ್ಡರೂ ಬಂದಿತು. "ಹಣ ಕಳಿಸಿದಾಗ ಹೋಗದಿದ್ದರೆ ಹೇಗೆ? ಛೀ, ನನ್ನ ಬಗ್ಗೆ ಬೇರೇನೂ ಭಾವಿಸುವದಿಲ್ಲ ವಿಮಲೆ" ಎಂದು ವಿಚಾರಿಸಿ, 'ಮದುವೆ'ಯ ಬಗ್ಗೆ ಕವನ ಒಂದನ್ನು ಬರೆದು ಕ್ಷಮೆ ಕೋರಿ ಓಲೆ ಕಳಿಸಿದನು.

'ಪುಣೆಗೆ ಹೋಗಿದ್ದರೇ ಒಳ್ಳೆಯದಾಗುತ್ತಿತ್ತು' ಎಂದು ಅನ್ನುತ್ತ ಅನಂತ ಖೋಲಿಯಲ್ಲಿ ಕ್ಲಾಸಿಗೆ ಹಚ್ಚಿದ ಹೆಮ್ಲೆಟ್ ಓದುತ್ತಿದ್ದ. ಹೆಮ್ಲೆಟ್ ತನ್ನ

ಪ್ರೇಯಸಿ ಆಫಿಲೀಯಾಳ ಮೋಸಕ್ಕೆ ಸಿಟ್ಟಿಗೆದ್ದು ಹುಚ್ಚನಾಗಿ ಅನ್ನುವ ವಾಕ್ಯ ವನ್ನೆ ಅನಂತ " Frailty thy name is women " ಎಂದು ಅಂದು " ಚಂಚಲತೆ ಪೆಣ್ಣಲ್ತೆ ನಿನ್ನ ಹೆಸರು " ಎಂಬ ಕನ್ನಡ ಕವಿಯ ಉಕ್ತಿಯನ್ನು ಅರ್ಥವಾಗಿ ಗಟ್ಟಿಯಾಗಿ ಓದಿದ. ಟಕ್ ಟಕ್ ಬಾಗಿಲ ಸಪ್ಪಳವಾಯಿತು. ಬಾಗಿಲು ತೆರೆಯಲು ಸರೋಜ ನಿಂತಿದ್ದಳು. ತಾನು ಗಟ್ಟಿಯಾಗಿ ಓದಿದ್ದು ಕೇಳಿಸಿರಬಹುದೆಂದು ತುಸು ಅಂಜಿಕೊಂಡ.

ಫರ್ನಾಸಿನಲ್ಲಿ ಸರೋಜ ತಂದಿದ್ದ ಚಹಾ ಇಬ್ಬರೂ ಕುಡಿದರು. "ಅಲ್ಲಾ, ಆ ಹ್ಯಾಮ್ಲೆಟ್ಟಿನ ವಾಕ್ಯ ಅಷ್ಟ್ಯಾಕ ಒದರಿ ಓದಿದರಿ" ಎಂದಳು ಸರೋಜ.

" ಛಲೋ ಇತ್ತು ಅಂತ. "

" ಸುಳ್ಳ ಅದ ಅದು. ಏನೋ ಒಬ್ಬಾಕಿ ಹಾಂಗ ಇದ್ದರ ಇಡೀ ಹೆಣ್ಣಿನ ಜಾತಿ ಹಾಂಗ ಇರತದೇನು ? "

ಮಾಡಿದ ಅಪರಾಧ ಮರೆಮಾಡಲು ಸರೋಜ ತೆಗೆದ ಯುಕ್ತಿ ಇದು ಇರಬಹುದೆಂದು ಅನಂತ ತರ್ಕಿಸಿದನು. ಪ್ರೀತಿ ಇನ್ನೂ ಇದೆಯೆಂದು ತೋರಿ ಸಲು ಹೂಡಿದ ಆಟ ಇರಬಹುದೆಂಬ ಕಲ್ಪನೆಯಿಂದ

" ಶೆಕ್ಸಪೀಯರ ಸತ್ಯವಾದಿ. ಹ್ಯಾಮ್ಲೆಟ್ಟಿನ ವಾಕ್ಯ ಅಮರ ಸತ್ಯ " ಎಂದನು.

" ಸುಳ್ಳು ಸುಳ್ಳು ಅದು ಪಾಶ್ಚಿಮಾತ್ಯರಲ್ಲಿ ಬೇಕಾದರೆ ಇರಬಹುದು. "

" ವಿಶ್ವದ ತುಂಬೆಲ್ಲ ಅವನ ಮಾತು ದೇವಸತ್ಯ. "

ರಾಮಣ್ಣಾ ಪೋಸ್ಟಮನ್ನನ ' ಸಾಹೇಬರ ' ಎಂಬ ಶಬ್ದ ಸರೋಜ ಅನಂತರ ಚರ್ಚೆಯ ಗಾಡಿಗೆ ಬ್ರೆಕ್ಕು ಹಾಕಿತು. ಹೈದ್ರಾಬಾದ ಸರಕಾರದ ಲಕೋಟಿ ಕೊಟ್ಟು ರಾಮಣ್ಣಾ ಹೋದ. " ಏನದು ? " ಎಂದಳು ಸರೋಜ. " ನನ್ನ ಆಬಚೀ ಮಗನ ಪತ್ರ " ಎಂಬ ಹಾರಿಕೆಯ ಉತ್ತರ ಕೊಟ್ಟ ಅನಂತ. ಬಂದ ಪತ್ರ ಅನಂತನ ಕಾವನ್ನು ಕಡಿಮೆ ಮಾಡಿತು.

" ಅಲ್ಲಾ ಪ್ರೊಫೆಸರರು ಭೆಟ್ಟಿಯಾಗಿದ್ದರೇನು ? ಮತ್ತ ಪರೀಕ್ಷೆ ಆದ ವ್ಯಾಲೆ " ಎಂದು ಸರೋಜ ಕೇಳಿದಳು.

" ಯಾತರ ಬಗ್ಗೆ ? ಪರೀಕ್ಷೆ ಬಹಳ ಕಠಿಣವಿದೆ. ಮುಂದಿನದು

ಈಗ್ಯಾಕ ನಾಳೇ ಹ್ಯಾಂಗ ಅಂಬೋದು ತ್ರಾಸ ಆದ. ಅಂದ ಮ್ಯಾಲೆ ಮುಂದಿನದು? "

ಅನಂತನ ಮಾತಿನ ಕೊಂಕುಅರ್ಥ ಸರೋಜ ಗ್ರಹಿಸಹತ್ತಿದಳು. ಒಮ್ಮೆಲೇ "ಏನಂತರಿ ? ಪರೀಕ್ಷಾ ಆದ ಮ್ಯಾಲೆ ಹೂಂ ಹೌದಲ್ಲೊ" ಎಂದಳು. ಅನಂತ ಸುಮ್ಮನೇ ಕೂತ.

"ಯಾಕ ಸಿಟ್ಟ ಬಂದದೇನು ನನ್ನ ಮ್ಯಾಲೆ. "

"ನಿನ್ನ ಮ್ಯಾಲೆ ಸಿಟ್ಟು ಮಾಡಲಿಕ್ಕೆ ನಾನು ಯಾರು? ನಿನ್ನ ಮೇಲೆ ನನಗಿಲ್ಲ ಸಿಟ್ಟು. "

"ಯಾಕ ಇವತ್ತ ಬ್ಯಾರೆ ಆಗೀರಿ ನೀವು. "

"ಹೌದು, ನಾನು ಇವತ್ತು ಬ್ಯಾರೆ ಆಗೀನಿ, ಆದರ ನೀನು ಬಹಳ ದಿವಸದಿಂದ ಬ್ಯಾರೆ ಆಗೀದಿ. "

ಸರೋಜಳ ಕೋಮಲ ಶರೀರ ನಡುಗಹತ್ತಿತು. ಮುಖದ ಮೇಲೆ ದುಃಖ ಉಕ್ಕೇರಿ, " ನನ್ನ ತಪ್ಪೇನಃ ಏನದ " ಎಂದಳು.

"ನನ್ನ ತಪ್ಪು ನನಗ ಗೊತ್ತಿಲ್ಲ ನಿಂದ್ಹ್ಯಾಂಗ ಗೊತ್ತಾಗತದ. "

"ಕ್ಷಮಿಸತಿರಿಲ್ಲೊ ? ಕ್ಷಮಿಸಿರಿ " ಎಂದಳು.

ಅನಂತ ಸುಮ್ಮನೆ ಮೂಕ ಕುರಿಯಂತೆ ಕುಳಿತ.

ಸರೋಜ ಒಮ್ಮೆಲೇ ಹೊರಗೆ ಹೋದಳು.

ಆರ್ಡರ ನೋಡಿದನು. ಇಂಟರವ್ಯೂಕ್ಕೆ ಕರೆ ಬಂದಿತ್ತು. ಆನಂದಕ್ಕೆ ತುದಿ ಇಲ್ಲದಾಯಿತು. "ಆದರೆ ಛೆ, ಗುಲಾಮನಾಗುವದಕ್ಕಿಂತ ಊರಲ್ಲಿ ನಿಲ್ಲುವದೇ ಒಳಿತಲ್ಲವೆ? ಅಲ್ಲಿ ನಿಂತರೆ ಪ್ರೀತಿಯಿಂದ ನೋಡುವ ತಂದೆ ತಾಯಿಗಳೇ ನಾಳೆ ಬೇರೆ ಕಣ್ಣಿನಿಂದ ನೋಡುವರು. ಅಥವಾ ಸಾರ್ವಜನಿಕ ಸೇವಕನೆಂಬ ಸೋಗಿನಿಂದ ಮೆರೆಯಬೇಕೆ? ಸುಳ್ಳು ! ಜಗದಲ್ಲಿ ಬಾಳುವದು ದುಡ್ಡು. ದುಡ್ಡಿದ್ದರೆ ತಂದೆ, ದುಡ್ಡಿದ್ದರೆ ತಾಯಿ, ದುಡ್ಡಿದ್ದರೆ ಮಡದಿ-ಮಕ್ಕಳು. ಮನುಷ್ಯನ ಮಾನ, ಮರ್ಯಾದೆ, ಸ್ಥಾನ, ಚಾರಿತ್ರ್ಯ, ಬುದ್ಧಿಮತ್ತೆ ಅಳೆಯುವ ಮಾನದಂಡ-ದುಡ್ಡು. ಬಿ.ಎ. ಆದ ಮೇಲಾದರೂ ಏನು ? ನವಕರಿ ಅಲ್ಲವೆ ? ಅನಾಥರ ಕಾಮಧೇನು, ಕೈಯಲ್ಲಿ ಸಿಕ್ಕದ್ದನ್ನು ಬಿಟ್ಟರೆ ಮುಂದೇನು ? ಬಿ. ಎ.

ಮುಗಿಸುವದಾದರೂ ಹೇಗೆ? ಆಪ್ತ ಮಿತ್ರರು ಇದಕ್ಕೆ ಓಗೊಡಲಾರರು. ಇರಲಿ ಮುಂದೆ ನವಕರಿ ಆರ್ಡರ ಬಂದರೆ ವಿಚಾರ. ಸದ್ಯ ಉಳಿದ ಮಾರ್ಗ ವೆಂದರೆ ಹೈದ್ರಾಬಾದ ಪಯಣ" ಎಂಬ ನಿರ್ಣಯಕ್ಕೆ ಸತ್ಯಾಸತ್ಯತೆಯ ವಿಚಾರ ಮಂಥನದಲ್ಲಿ ಬಂದನು.

ಆದೇ ಊಟಮಾಡಿ ಆರಾಮಾಗಿ ಕುಳಿತಿದ್ದ. ಸರೋಜ ಬಂದಳು. ತಾಸಿನ ಹಿಂದೆ ಇದ್ದ ಸರೋಜಳ ರೂಪ ಈಗ ಬದಲಾಗಿದೆ. ಕೈಯಲ್ಲಿಯ ಪತ್ರಗಳ ಗಂಟನ್ನು ದೊಪ್ಪನೆ ಒಗೆದಳು. ಅಳುವು ಉಕ್ಕಿ ಬಂದಿತು. 'ಸುಮ್ಮ ನಾಗು' ಎಂದ ಅನಂತ. ಸಿಗ್ಗಾವಿ, ಕುಲಕರ್ಣಿಯರು ಹೂಡಿದ ಗುಟ್ಟು ರಟ್ಟಾ ಯಿತು. ಪತ್ರಗಳನ್ನೆಲ್ಲ ಅನಂತ ಓದಿದ ಹಾಗೆ ಅನಂತನಲ್ಲಿ ರೌದ್ರತೆ ಏರುತ್ತ ನಡೆಯಿತು.

ಅನಂತ "ಸರೋಜ, ನೀನು ೨೩ನೇ ತಾರೀಖಿನ ರಾತ್ರಿ ಸಿನೇಮಕ್ಕೆ ಹೋಗಿದ್ದಿಲ್ಲವೆ?" ಎಂದ.

ಸರೋಜ ಡಾಯರಿ ತೋರಿಸಿ "೧೮ನೇ ತಾರೀಖಿಗೆ ನಾನು ನನ್ನ ಗೆಳತಿಯ ಲಗ್ನಕ್ಕಃ ಬಾಗಿಲ ಕೋಟೆಗೆ ಹೋಗಿದ್ದೆ" ಎಂದಳು.

"ಅಲ್ಲಿ ಆದರೂ ಫೊಟೋ ತೆಗಿಸೀ ಏನು?"

"ಇನ್ನೂ ವರೆಗೆ ಎಲ್ಲಿಯೂ ಇಲ್ಲ, ಆದರೆ ಮೊನ್ನೆ ಕಾಲೇಜ ಯೂನಿ ಯನ್ನದ ಸಭೆಯಲ್ಲಿ ಮಾತ್ರ ಎಲ್ಲರ ಸಂಗಡ ಸದಸ್ಯಳಾಗಿದ್ದಕ್ಕೆ ಕೂತಿದ್ದೆ."

"ಸಿಗ್ಗಾವಿ ಸಂಗಡ ಸರೋಜ ಇದ್ದ ಫೋಟೊ ಎಲ್ಲಿಯದು? ಕುಲ ಕರ್ಣಿ ನಿನ್ನೇ ಫೋಟೊ ತೋರಿಸಿದ್ದಾನೆ" ಎಂಬ ವಿಚಾರ ಚುಚ್ಚಹತ್ತಿತು ಅನಂತನನ್ನು.

ಅಷ್ಟರಲ್ಲಿ ಅನಂತನ ಜೀವದ ಗೆಳೆಯ ಮುರಲಿ "ಅನಂತಾ ಅನಂತಾ" ಎಂದು ಸಂತಸದಿಂದ ಕೂಗುತ್ತ ಬಂದ. "ಅನಂತಾ You are lucky ನಿನ್ನ ಸಾಮಾನು ಸಿಕ್ಕವು" ಎಂದ. ಇಬ್ಬರೂ ಸಂಜೆಗೆ ಕಚೇರಿಗೆ ಹೋಗಲು ನಿಶ್ಚಯಿಸಿದರು.

ಅನಂತ ಮತ್ತು ಮುರಲಿ ಇವರಲ್ಲಿ ಬೇರೆ ಇರುವದೆಂದರೆ ದೇಹ ಮಾತ್ರ. ಅನಂತ-ಸರೋಜರ ಮಧುರ ಮಿಲನದ ನಾಂದಿ ಹಾಡಿದವ ಮುರಲಿಯೇ.

"ಇದೇನು ಪತ್ರಗಳ ರಾಶಿ" ಅಂದ ಮುರಲಿ.

"ನನ್ನ ಬಾಳುವೆ ಬೂದಿ ಮಾಡುವ ಬೆಂಕಿಯದೇ ಈ ರೂಪ" ಎಂದಳು ಸರೋಜ.

"ಅನಂತಾ, ನಾ ನಿನಗ ಹೇಳಿಲ್ಲ? ಸರೋಜಾ ಅಂದರ ನನ್ನ ತಂಗಿ ಅಂತ. ಆಕೀ ಮ್ಯಾಲೂ ಸಂಶಯನ?"

"ಮುರಲಿ, ಕುಲಕರ್ಣಿ ನನಗ ಸಿಗ್ಗಾವಿ–ಸರೋಜರ ಫೋಟೊ ತೋರಿಸ್ಯಾನ."

"ಸುಳ್ಳು, ಸುಳ್ಳು!" ಎಂದ ಮುರಲಿ.

ಸರೋಜ ನೆಲಕ್ಕೇ ಕುಸಿಬಿದ್ದಳು.

"ಏ ಅನಂತಾ ತಿಳಿಯಿತು. ಆ ಫೋಟೋಗ್ರಾಫರ ಭನಸಾಲಿಯ ಸಂಗಡ ಈ ಕುಲಕರ್ಣಿ ಎಂಡ ಕೋ ಅಡ್ಡಾಡತಿತ್ತು. ಮೊನ್ನೆ ಚಹಾದ ಅಂಗಡ್ಯಾಗ ಹತ್ತು ಅಂತ ಇವರ ಅಂತಿದ್ರು, ಇಪ್ಪತ್ತು ಅಂತ ಅವ ಅಂತಿದ್ದಾ. ಸರೋಜಾ ಮೊನ್ನೆ ಕಾಲೇಜದಾಗ ಅಲ್ಲದ ಮತ್ತೆಲ್ಲ್ಯಾರ ಫೋಟೊ ತಗಸೀ ಏನು?"

"ಇಲ್ಲ ಅಣ್ಣಾ,

"ಏ ಅನಂತಾ, ಬೇಕಾದ್ರ ಇವತ್ತು ಭನಸಾಲಿಗೆ ಒಂದೈದು ರೂಪಾಯಿ ಕೊಡೋಣ, ತಿಳೀತದ ನೋಡು. ಗ್ರುಪ್ ಫೋಟೋದಿಂದಲೇ ಸರೋಜಳದೊಂದು ತನ್ನದೊಂದು ಬೇರೆ ಬೇರೆ ತೆಗಿಸಿ ಆ ಮೇಲೆ ಜೋಡಿಸಿ ಈ ಆಟ ಹೂಡಿರಬೇಕು. ಅಲ್ಲೋ ಅನಂತಾ, ಈ ಪತ್ರಗಳೇ ಅವರ ಅವಿವೇಕತನಕ್ಕೆ ಪುರಾವೆಯಲ್ಲವೇನು?"

"ಅಣ್ಣಾ, ನನ್ನ ಮರ್ಯಾದೆ ಕಳಿಯಲಿಕ್ಕೆ ಅವರದೀ ಪ್ರಯತ್ನ. ಮದುವೆ ಮಾಡಿಕೋ ಎಂದು ಚೀಟಿ ಬರೆದರು. ಮತ್ತೆ ಮತ್ತೆ ಝೋಲಿಯಲ್ಲಿ ರೂಪಾಯಿ ಒಗೆದು ಹೋದ್ರು. ನನ್ನ ಗೆಳತಿ ಗೋದಾಗ ಎಲ್ಲಾ ಹೇಳೀನಿ. ಇವತ್ತ ಈ ಪತ್ರ ಪ್ರೊಫೆಸರರಿಗೆ ಕೊಡಬೇಕೆಂದೂ ಮಾಡಿದ್ದೆ. ನಮ್ಮ ಮಾವಗೂ ಅವರು ಹುಚ್ಚುಚ್ಚಾರ ಬರದಾರಂತ" ಅಂದಳು.

ಅನಂತ ಕಡ್ಡೀ ಕೊರೆದು "ನಿನಗ ಕಲಂಕ ಹಚ್ಚುವ ಆ ಪತ್ರವನ್ನು

ತಾ ಇಲ್ಲಿ " ಎಂದು ಅಂದು ಸುಟ್ಟನು. ಬೆಂಕಿಯಲ್ಲಿಯ ಸೀತೆಯಂತೆ ಅವನ ಪಾಲಿಗೆ ಶುದ್ಧಳಾದಳು ಸರೋಜ. ಮುರಲಿ " ಅನಂತಾ, ಕೈ ತಾ ಇಲ್ಲಿ " ಅಂದ. ಅನಂತನ ಕೈ ಸರೋಜಳ ಕೈ ಹಿಡಿಯಿತು. ಅನಂತ " ಸರೂ " ಎಂದ. ಸರೋಜ ನಕ್ಕಳು. ಆ ನಗೆ ದುಃಖದ ಆಳದಿಂದ ಇಬ್ಬರನ್ನೂ ಮೇಲೆ ತೇಲಿಸಿತು.

ಕಚೇರಿಗೆ ಹೋಗಿ ಕಳವಾಗಿದ್ದ ವಸ್ತುಗಳನ್ನೆಲ್ಲ ಗುರುತು ಹಿಡಿದು, ರೂಪಾಯಿಗಳನ್ನೂ ಸಾಮಾನುಗಳನ್ನೂ ತೆಗೆದುಕೊಂಡು, "ಕಳ್ಳ ಯಾರ್ರಿ? " ಎಂದನು. ಮುರಲಿಯ ಗೆಳೆಯ ಹಿರೇಮಠ ಸಬ್ ಇನಸ್ಪೆಕ್ಟರರು " ಇವನೇ ನೋಡ್ರಿ " ಎಂದು ಒಳಗೆ ಕೂಡ್ರಿಸಿದ ಹದಿನೈದು ವರ್ಷದ ಹುಡುಗನನ್ನು ತೋರಿಸಿದರು. " ಎಲೇ ಇವನ, ಸೀ ಯಾಕೊ? ಕಳವು ನೀ ಮಾಡಿದೇನು? " ಎಂದರು ಅನಂತ ಮುರಲಿಯರು ಸಿಗ್ಗಾವಿಯ ತಮ್ಮ ಮರಿಸಿಗ್ಗಾವಿಗೆ. " ಹಿರೇಮಠ, ಇದನ್ನ ಇಲ್ಲೆ ಮುಗಿಸಿ ಬಿಡಪಾ. ಇವಾ ನಮ್ಮ ಕ್ಲಾಸಮೇಟ್ ಸಿಗ್ಗಾವಿ ತಮ್ಮ. ಸಣ್ಣ ಹುಡುಗ, ಗೊತ್ತಿಲ್ಲದ ಮಾಡ್ಯಾನ, ಮ್ಯಾಲೆ ನಮ್ಮವೂ ಸಾಮಾನ ಸಿಕ್ಯಾವ " ಎಂದ ಮುರಲಿ.

" ನಿನಗ ಯಾರರ ಹೇಳಿದ್ರೋ ನೀನsss ಮಾಡಿದ್ಯೋ ? " ಎಂದರು ಫೌಜ ದಾರರು. ಅಳುತ್ತ " ನಮ್ಮ ಅಣ್ಣನ ಗೆಳೆಯ ಕುಲಕರ್ಣಿ ಕೀಲಿ ಕೈ ತಂದು ಕೊಟ್ಟು, ಮಾಡ ಅಂದನ್ರಿ " ಎಂದ. " ಆ ಕುಲಕರ್ಣಿನ್ನೂ ಹಿಡದು ತರಸ ಲೇನು ? " ಎಂದರು ಸಾಹೇಬರು. " ಈಗ ಬ್ಯಾಡ ನನ್ನ ತಂಗಿಗೂ ತ್ರಾಸ ಕೊಟ್ಟಾರ ಅವರು. ನಾವು ಹೋದ ಮ್ಯಾಲೆ ಆ ಕುಲಕರ್ಣಿ, ಸಿಗ್ಗಾವಿ ಇಬ್ಬ ರನ್ನೂ ಕರಿಸಿ, ಸ್ವಲ್ಪ ಬಿಸಿ ಮಾಡಿ ಬಿಟ್ಟು ಬಿಡು ಮತ್ತ " ಅಂದ ಮುರಲಿ.

" Thanks " ಎಂದು ಅನಂತ ಕೈ ಮುಗಿದ "ನಮ್ಮ ಕೆಲಸನss ಇದೇಳ್ರಿ" ಎಂದು ಅನ್ನುತ್ತ ಸಾಹೇಬರು ಕೈ ಮುಗಿದರು.

ಖೋಲಿಗೆ ಬಂದ ಅನಂತ. ಮತ್ತೊಮ್ಮೆ ಇಂಟರವ್ಯೂ ಆರ್ಡರ್ ಓದಿದ. "ಬಿ. ಏ.ದ ನಂತರವೇ ಹೋದಲ್ಲಿ ಹಿತ. ಆದರೆ ನವಕರಿ ಸಿಗದಿದ್ದಲ್ಲಿ ಮುಂದೇನು ?" ಎಂದು ವಿಚಾರಿಸುತ್ತಲೇ ಅನುಭಾವಿ ಆಧ್ಯಾತ್ಮಿಯಾದನು. "ಜನಸೇವೆಯೇ ನನ್ನ ಬಾಳಿನ ಗುರಿ, ಆ ಗುರಿ ತಲುಪಲು ಇದೊಂದು ಅತ್ಯು ತ್ತಮ ದಾರಿ ಅಲ್ಲವೆ ? ಸರಕಾರಿ ನವಕರಿ ಆದರೂ ಸಾಧಕನಾಗಿ ಇಷ್ಟ ಸಿದ್ಧಿ

ಯನ್ನು ಪಡೆಯಬಹುದು. ಪಂಚಭೂತಗಳಿಂದ ಪೂರಿತವಾದ ಪ್ರಪಂಚದಲ್ಲಿ ಪಂಚಕರ್ಮೇಂದ್ರಿಯ ಜ್ಞಾನೇಂದ್ರಿಯಗಳಿಂದ ಕರ್ಮಯೋಗಿಯಾಗಿಯೇ ಪರಮಾತ್ಮನ ರೂಪವನ್ನು ಆತ್ಮಸಾಕ್ಷಾತ್ಕಾರದಲ್ಲಿ ಕಾಣಬಹುದಲ್ಲ ! ಕರ್ಮ, ಅನುಷ್ಠಾನ, ಜ್ಞಾನ, ವಿಜ್ಞಾನಕ್ಕಿಂತ ಮಿಗಿಲು. ಸಾಧನೆಯಿಂದಲೇ ಸಿದ್ಧಿ. ಧ್ಯಾನಬಿಂಬೋಪಾಸನಕ್ಕಿಂತ ಪರಮಾತ್ಮ ಬಿಂಬರೂಪಿ ನರಕೋಟಿ ಪೂಜೆಯೇ ಶುದ್ಧ ಭಾವವೆಂದೂ, ತನಗಾಗಿ ಯಾರೂ ಇರದಿದ್ದರೂ ತಾನು ಮಾತ್ರ ಎಲ್ಲರಿಗೂ ಇರುವೆ" ನೆಂದು ತತ್ವವಾದಿಯಂತೆ ತರ್ಕಿಸಿ, ಸಂಜೆಯ ಹವೆಗಾಗಿ ಹೊರಗೆ ನಡೆದ.

ಸಾಧನಕೇರಿಯ ಅಡವಿಯ ದೃಶ್ಯ ಅನಂತನಿಗೆ ಬೇಗನೆ ಅಪ್ಪಣೆ ಕೊಡಲಿಲ್ಲ. ಆದರೆ ಅನಂತನ ಉಗ್ರ ತಪಸ್ಸು ವರವನ್ನು ಪಡೆಯಿತು. ಇಲ್ಲಿಯವರೆಗೆ ಆಶ್ರಯವಿತ್ತ ಸಂಗಾತಿಯೂ, ಶಿಕ್ಷಕಳೂ ಆದ ವನದೇವಿಗೆ ಕೈಮುಗಿದ. ಸೌಂದರ್ಯನಿಧಿಯಂತಿದ್ದ ಸಾಧನಕೇರಿಯ ಭೂತಾಯಿಗೆ ಬೇಡಿಕೊಂಡ. ಪುನಃ ಕೋಣೆಗೆ ಬಂದು ಹೊರಡುವ ಸಿದ್ಧತೆಗಳೆಲ್ಲವನ್ನೂ ಮಾಡಿಕೊಂಡ.

ಮುಂಜಾವಿನಲ್ಲಿಯೇ ಎದ್ದ. ಭಕ್ತಿಪರವಶನಾಗಿ ಪುಸ್ತಕಗಳನ್ನು ತಲೆಯ ಮೇಲಿಟ್ಟುಕೊಂಡ. ಗೋಡೆ ಕಂಬಗಳನ್ನು ಮುಟ್ಟಿ ಅಗಲುವಿಕೆಯ ವಂದನೆಗಳನ್ನು ಅರ್ಪಿಸಿದ. ಎಲ್ಲರಿಂದಲೂ ಮುಚ್ಚಿಟ್ಟಿದ್ದ ಸುದ್ದಿಯನ್ನು ಖೋಲಿಯ ಪ್ರತಿಯೊಂದು ಕಣಕ್ಕೂ ಕೇಳುವಂತೆ ' ಹೋಗಿ ಬರುತ್ತೇನೆ ' ಎಂದು ಅಂದ. ಮತ್ತೊಮ್ಮೆ ಧಾರವಾಡಕ್ಕೆ ಮನವಾರೆ ಕೈಮುಗಿದ. ದುಃಖ ತುಂಬಿ ಬಂತು. ಆದರೆ ಪ್ರಸಂಗ ಅನಿವಾರ್ಯವಾಗಿತ್ತು.

ಧಾರವಾಡದಿಂದ ಗಾಡಿ ಹತ್ತಿದ. ಅನಂತನ ಗಾಡಿ ಮುಂದೆ ನಡೆಯಿತು. ನಡೆಯುವ ದಾರಿ ಇನ್ನೂ ಸಹಸ್ರ ಗಜವಿದೆ.

## ೧೦

ಹೈದರಾಬಾದ ಸಂಸ್ಥಾನದಲ್ಲಿ ಅನಂತನ ಹಿರಿಯರು ಗಳಿಸಿಟ್ಟ ಆಸ್ತಿ, ಇನ್ನೂ ಇತ್ತು. ಇದಲ್ಲದೆ ಆಪ್ತಬಾಂಧವರಲ್ಲೊಬ್ಬರು ನವಕರಿ ಮಾಡುವದು

ಅಲ್ಲಿಯೇ. ಆದ್ದರಿಂದ ಸಂಸ್ಥಾನ ಸರಕಾರದ ಸೇವೆ ಮಾಡಲು ಅವಶ್ಯವಾದ ಮುಲ್ಕೀ ಸರ್ಟಿಫಿಕೇಟು ದೊರೆಯಿತು. ಎರಡು ಮೂರು ಹಿಂದೀ ಪರೀಕ್ಷೆಗಳು ಆಗಿದ್ದರಿಂದ ಅವನಿಗೆ ಹರಕು ಮುರಕು ಹಿಂದೀ ಮಾತಾಡಲೂ ಬರುತ್ತಿತ್ತು. ಮೇಲಾಗಿ ಇಂಟರ ಪರೀಕ್ಷೆ ಪಾಸಾದ ಯೋಗ್ಯತಾ ಪತ್ರವಿದೆ. ಇವೆಲ್ಲವುಗಳಿಗಿಂತಲೂ ಸಿಲೆಕ್ಶನ್ನಿಗೆ ಅವಶ್ಯಕವಾದ ದೇಹದಾರ್ಢ್ಯ, ಅಂಗಸೌಂದರ್ಯಗಳೂ ಇವೆ. ಅಂದ ಮೇಲೆ ಪೋಲೀಸ ಇನಸ್ಪೆಕ್ಟರನಾಗಬಹುದೆಂದು ಅನಂತ ಕಲ್ಪಿಸಿದ್ದರೆ ಏನು ತಪ್ಪು? ಮೇಲಾಗಿ ಮಾನಸಿಕ ಪರಿವರ್ತನೆಯು ಅವನಲ್ಲಿ ವಿಚಿತ್ರ ಶಕ್ತಿಯನ್ನು ದಯಪಾಲಿಸಿತ್ತು.

ನೋಡದ ಊರಿಗೆ ಅನಂತ ನಡೆದ. ತಾಯಿ ಊರಿನ ಅಂತರವೂ ರೈಲಿನಲ್ಲಿ ಅಪರಿಚಿತರ ಸಂಗಡ ಬಳಕೆಯೂ ಅನಂತನಲ್ಲಿ ಅಧೈರ್ಯ ತಂದವು. ಮನ ಮುದುಡಿತು. ನೊಂದುಕೊಂಡ, ಆದರೆ ಆಶೆ "ನುಗ್ಗಿ ನಡೆ ಮುಂದೆ, ಕುಗ್ಗದಲೆ ಜಗ್ಗದಲೆ" ಎಂದು ಹೇಳುತ್ತಿತ್ತು. "ನಾನೂ ಒಬ್ಬ ಅಧಿಕಾರಿಯಾಗಿ, ಜನಸೇವೆ ಮಾಡುವೆ, ಮುಪ್ಪಿನ ತಂದೆ-ತಾಯಿಗಳ ಬಡತನ ಹಿಂಗಿಸುವೆ, ಬಡವಿದ್ಯಾರ್ಥಿಗಳಿಗೆ ಕೈತುಂಬ ಸಹಾಯ ಮಾಡುವೆ, ಸರೋಜಳ ಕೈ ಹಿಡಿಯುವೆ" ಎಂದು ವಿಚಾರಿಸುತ್ತ ಕಣ್ಣು ಮುಚ್ಚಿದ. ಕಣ್ಣು ತೆರೆದಾಗ ಗಾಡಿ ರಾಜಧಾನಿಯಾದ ಹೈದ್ರಾಬಾದ ನಾಂಪಲ್ಲಿ ಸ್ಟೇಶನದ ಮೇಲೆ ನಿಂತಿತ್ತು.

ಗಾಡಿ ಇಳಿದನು. ಎಲ್ಲವೂ ಹೊಸದು, ಎಲ್ಲವೂ ವಿಚಿತ್ರ. ಹೈದರಾಬಾದಿನ ಹೊಸತನ ನೋಡಿ ಅಚ್ಚರಿಪಟ್ಟ ಅನಂತ. "ಕ್ಯಾ ಸಾಬ ರಿಕ್ಷಾ ಹೋನಾ?" ಎಂದು ರಿಕ್ಷಾವಾಲಾ ಕೇಳಿದನು. "ಹೂಂ ಹಿಂದೂ ಹೋಟೆಲ್ಲಿಗೆ ಕ್ಯಾ ದೇನಾ" ಎನ್ನುತ್ತ ರಿಕ್ಷಾದಲ್ಲಿ ಕೂತನು. "ಸಾಬ ದೇಖಕೆ ದೀಜಿಯೇ" ಎನ್ನುತ್ತ ರಿಕ್ಷಾವಾಲನು ಕಾಲುಗಾಡಿ ತುಳಿಯಹತ್ತಿದನು. ಅತ್ತಿತ್ತ ಅಂಕುಡೊಂಕಾಗಿ ಅಡ್ಡಾಡಿ ಸುಲ್ತಾನ ಬಜಾರದ 'ಸರಸ್ವತಿ ಲಾಜಿಗೆ' ತಂದನು. ಅನಂತ ರೂಪಾಯಿ ಕೂಲಿ ಕೊಡಹೋದನು. "ನಹಿ ಸಾಬ ಬಹುತ ದೂರಸೆ ಆಯಾ ಹುಂ" ಎನ್ನಹತ್ತಿದ ರಿಕ್ಷಾವಾಲ. "ಅಚ್ಛಾ" ಎಂದು ಇನ್ನೆಂಟಾಣೆ ಅನಂತ ಅವನ ಕೈಯಲ್ಲಿಟ್ಟ. 'ಕಿತನಾ ದಿಯಾ' ಎಂದು ಹೋಟೆಲ್ ಮಾಲಕ ಕೇಳಿದ. "ಒಂದೂವರೆ ರೂಪಾಯಿ" ಎಂದ ಅನಂತ. ನೆರೆದವ

ರೆಲ್ಲ ನಕ್ಕರು. "ನಾಂಪಲ್ಲಿಯಿಂದ ಇಲ್ಲಿಗೆ ನಾಲ್ಕು ಆಣೆ ಸ್ವಾಮಿ" ಎಂದು ಅಲ್ಲಿದ್ದವನೊಬ್ಬ ನುಡಿದ. ರಿಕ್ಷಾವಾಲನ ಮೋಸತನಕ್ಕೆ ಅನಂತ ಮಿಡುಕಿದ. ಕೈಯಲ್ಲಿ ಹಣ ಇರುವ ವರೆಗೆ ಅನಂತ ಕುಬೇರನೇ. ಹೀಗೆಯೇ ಮೂರು ದಿನಗಳು ಉರುಳಿದವು. ಮೂರನೇ ದಿನವೇ ವಿಧಿವಾಕ್ಯ ಸತ್ಯಮಾಡುವ ಇಂಟರವ್ಯೂ ಕಾದು ನಿಂತಿತ್ತು.

ಇಂಟರವ್ಯೂ ಯಜ್ಞಕ್ಕೆ ಅವಶ್ಯವಾದ ವೇಷ ಧರಿಸಿ ಯಜ್ಞಮಂಟಪಕ್ಕೆ ಹೋದ. ಪರೀಕ್ಷಕರೆಲ್ಲರೂ ಮಹಮ್ಮದೀಯರೆ. ಕೇಳಿದ ಎಲ್ಲ ಪ್ರಶ್ನೆಗಳಿಗೂ ಸರಿಯಾದ ಜವಾಬು. ಎಲ್ಲ ವಿಷಯುಗಳಲ್ಲಿಯೂ ಅನಂತನದೇ ಮೊದಲ ಸ್ಥಾನ. ಜಾತಿದ್ವೇಷದ ತಕ್ಕಡಿಯಲ್ಲಿ ಅನಂತನ ಗುಣಗಳು ತೂಕಮಾಡಲ್ಪಟ್ಟವು. ಬೌದ್ಧಿಕ ಅಸಮಾನತೆ, ದೈಹಿಕ ದಾರ್ಢ್ಯತೆಗಳು ಪರೀಕ್ಷಕರ ನಿರ್ಣಯಾತ್ಮಕ ಒರೆಗಲ್ಲಿನಿಂದಲೂ ಪಾರಾಗಿ ಅನಂತನನ್ನು ಯಶಸ್ವಿ ಉಮೇದವಾರರ ಲಿಸ್ಟಿನಲ್ಲಿ ಪ್ರಥಮಸ್ಥಾನದಲ್ಲಿ ನಿಲ್ಲಿಸಿದವು. ದೈವ ಸಂಕಲ್ಪ ಸತ್ಯವಾಗಲೇ ಬೇಕಲ್ಲವೆ?

ಅಂತೂ ಇಂಟರವ್ಯೂ ಸರ್ಕಸ್ ಮುಗಿಯಿತು. ದಣಿದ ಹುಲಿಯಂತೆ ವಾಸಸ್ಥಳವಾದ ಸರಸ್ವತೀ ಲಾಜಿಗೆ ಬಂದನು.

ಎರಡು ದಿನಗಳ ನಂತರ ಸಿಲೆಕ್‌ಶೆನ್ ಆದ ಸವಿ ಸುದ್ದಿಯೂ ಬಂದಿತು. ಮನದ ಬಾನಿನಲ್ಲಿ ಭಾವನೆಯ ಹಕ್ಕಿ ಹಾರಾಡಿ ಸ್ವರ್ಗೀಯ ಆನಂದರಸವನ್ನು ಈಂಟಿ ಬಂದಿತು. ಮುಂದೆರಡೇ ದಿನಗಳಲ್ಲಿ ಟ್ರೇನಿಂಗ್ ಕ್ಲಾಸನ್ನು ಸೇರಬೇಕೆಂಬ ಸುಗ್ರೀವಾಜ್ಞೆ ಕೈಯಲ್ಲಿ ಸಿಗುವ ವರೆಗೆ ಅನಂತನನ್ನು ಹೈದ್ರಾಬಾದಿನಲ್ಲಿಯೇ ನಿಲ್ಲಿಸಿತು.

ಸಿರಿ–ಸೌಖ್ಯಗಳ ಸಾಕ್ಷೀಭೂತವಾದ ಹೈದ್ರಾಬಾದಿನ ಸೊಬಗನ್ನು ನೋಡಲು ಅನಂತ ಹೊರಟನು. ಧಾರವಾಡ ಹೈದ್ರಾಬಾದಗಳ ತುಲನೆ ತಲೆಯಲ್ಲಿ ನಡೆಯಿತು. ಒಂದು ನಿಸರ್ಗಜನ್ಯ, ಇನ್ನೊಂದು ಕೃತ್ರಿಮಪೂರ್ಣ. ಹಿಂದೂ ಸಂಸ್ಕೃತಿಯ ಕುರುಹುಗಳಾದ ಮಂದಿರ–ಮಠಗಳು ಮುಳುಗಿ, ಅವುಗಳ ಸಮಾಧಿಗಳ ಮೇಲೆ ಮೋರೆ ಮೇಲಕ್ಕೆತ್ತಿ ನಿಂತ ಮಸೀದೆ, ನಮಾಜ ಗೃಹಗಳನ್ನು ನೋಡಿ ಹಳಹಳಿಸಿದನು. ತಾನಾಗಿ ಒದಗಿ ಬಂದ ವೇಳೆ ಉಪ

ಯೋಗಿಸಲು ಪಟ್ಟಣದ ಪ್ರದಕ್ಷಿಣೆ ಕೈಕೊಂಡನು. ದಕ್ಷಿಣದ ಬಹು ದೊಡ್ಡ ರಾಜಧಾನಿ ಅದು. ಸಾವಿರಾರು ಸುಲಿಗೆಯ ರೂಪದಿಂದ ತುಂಬಿದ ಭಾಗ್ಯನಗರ. ಜಾತೀಯ ಭೂತದ ದೊಡ್ಡ ಮನೆ.

ಪಾದಚಾರಿಯಾಗಿಯೇ ಅನಂತ 'ಚಾರಮಿನಾರ' ನೋಡಲು ನಡೆದ. ಕುಲಪಿಶಾಚಿಯ ಪಟ್ಟಣದಲ್ಲಿ ಹರಿಯುವದು ಅಪರಾಧವೆಂದು ಭಾವಿಸಿ ಮುನಿಸಿನಿಂದ ಹರಿಯುವ ಮುಸೀ ನದಿಯನ್ನು ದಾಟಿದ. ಆದರೆ ಬಿಳೀ ಬಣ್ಣ ಬಳಿದುಕೊಂಡು ಭವ್ಯವಾಗಿ ನಿಂತಿದ್ದ ಉಸ್ಮಾನಿಯಾ ರುಗ್ಣಾಲಯ ಮತ್ತು ವರಿಷ್ಠ ನ್ಯಾಯಮಂದಿರಗಳು ಅನಂತನನ್ನು ಕೈಮಾಡಿ ಹಿಂದೆ ಕರೆದವು. ಅನಂತ ಹೋಗಿ ಅವುಗಳನ್ನು ನೋಡಿ ನಲಿದ. ಪುನಃ ಮೊದಲಿನ ದಾರಿಯಲ್ಲಿಯೇ ನಾಲ್ಕು ಹೆಜ್ಜೆ ಮುಂದೆ ನಡೆದ. ದೂರದಲ್ಲಿ ಕಂಡಿತು, ಚಾರಮಿನಾರ. ಹಣದ ಒಡತಿಯನ್ನು ಸೆರೆ ಇಟ್ಟಿರುವರೆಂಬ ದಂತಕಥೆ ಕೇಳಿದ್ದರಿಂದ ಆಚ್ಚರಿಗೊಂಡ. ಪ್ರತೀತಿ ಸತ್ಯ ಮಾಡಲು ದಾರಿಯ ಇಕ್ಕೆಲದಲ್ಲಿ ಕುಬೇರ ಕುಲದ ವ್ಯಾಪಾರೀ ವರ್ಗ ನೆಲೆಸಿರುವದು ಅನಂತನಲ್ಲಿ ಏನೋ ಭಾವನೆಯನ್ನು ಹುಟ್ಟಿಸಿತು. ಪಾದ ಗಟ್ಟಿ ಮುಟ್ಟಿ, ಮೇಲೆ ಕೆಳಗೆ ನೋಡಿ, ಮನೆಗೆ ಹಿಂತಿರುಗಿದ.

ದಾರಿಯಲ್ಲಿ ಒಮ್ಮೆಲೇ ಸೀಟಿಗಳ ಸಪ್ಪಳ ಕೇಳಿಸಿತು. ಪೋಲೀಸರ ಕಾರ್ಯಕ್ಷಮತೆಯ ಬಗ್ಗೆ ಅವರನ್ನು ಅಭಿನಂದಿಸುತ್ತ ಸಾಗಿದ್ದ. "ಅರೇ ಭಾಯೀ, ದೂರ ಹಟೋ ಉಪ್ಪರ್ ಜಾವ" ಎಂದು ಪೋಲೀಸ ಅನಂತನನ್ನು ದಾರಿಯ ಮಗ್ಗಲಿಗೆ ನಿಲ್ಲಿಸಿದ. ಕ್ಷಣದಲ್ಲಿ ಸಂತೆಯಾಗಿದ್ದ ಸ್ಥಳ ಸ್ಮಶಾನವಾಯಿತು. ರಾಜಮಾರ್ಗವೆಲ್ಲ ಬರಿದಾಗಿ ಬಂಜೆಯಾಯಿತು. ಮಾರ್ಗದ ಒಂದಂಚಿನಲ್ಲಿ ನಿಂತಿದ್ದ ಅನಂತನೂ ಗಾಬರಿಯಾದ. ಏಳೆಂಟು ಕಾರುಗಳು ಸರ್‌ಸರ್ ಓಡಿದವು. ಈ ಕಣ್ಣುಮುಚ್ಚಾಲೆಯಾಟದ ಅರ್ಥ ಅನಂತನಿಗಾಗಲಿಲ್ಲ. ಏನೆಂದು ಜನರನ್ನು ಕೇಳಿದಾಗ "ಘನವಂತ ನಿಜಾಮರ ದರ್ಗಾ ದರ್ಶನದ ಸಂಚಾರ" ಎಂಬ ಉತ್ತರ ದೊರೆಯಿತು. ಪ್ರಜಾವತ್ಸಲರೆಂದು ಖ್ಯಾತ ನಾಮರಾದ ಪ್ರಜಾಪಾಲಕರನ್ನೂ ನೋಡದೆ ನೆಲೆಸಿರುವ ಸಾವಿರಾರು ನಾಗರಿಕರಲ್ಲಿ ಅನಂತನೂ ಒಬ್ಬನಾಗಿ ಮನೆಯ ದಾರೀ ಹಿಡಿದ.

ಮರುದಿನ ಸರಸ್ವತೀ ಸಾನ್ನಿಧ್ಯವಾಗಿರುವ ಉಸ್ಮಾನಿಯಾ ವಿಶ್ವವಿದ್ಯಾಲಯ ನೋಡಲು ನಡೆದ. ಸೌಂದರ್ಯ ರೂಪ ತಾಳಿದ ಗಂಭೀರ ಕಟ್ಟಡಗಳು

ಪ್ರತಿಭೆ, ಶುಭ್ರತೆ, ಸ್ವಚ್ಛತೆಗಳಿಂದ ಅನಂತನಲ್ಲಿ ಅಪಾರ ಆನಂದವನ್ನು ಹುಟ್ಟಿಸಿದವು. ಚಂದ್ರಕಾಂತ ಶಿಲೆಗಳು, ಸೌಧದ ಸೌಂದರ್ಯ ತೋರಿಸುವ ಕನ್ನಡಿಗಳಾಗಿದ್ದವು. ಗ್ರಂಥಭಾಂಡಾರ ನೋಡಿ ಬೆರಗಾದ. ಈ ಸೊಬಗು ಸೊಂಪುಗಳಿಂದ ಸರಸ್ವತಿ ಮತ್ಸರ ತಾಳಿರಬಹುದೇ ? ಎಂದು ಮನದಲ್ಲಿಯೇ ವಿಚಾರಿಸಿದನು. ಬಹುಜನರ ಭಾಷೆಯಾಗಿರದ ಉರ್ದು ಭಾಷೆ ಶಿಕ್ಷಣ ಮಾಧ್ಯಮ ಇರುವದು ಕೇಳಿ ಅಚ್ಚರಿಪಟ್ಟ. ಮಧ್ಯಾಹ್ನದ ಬಿಸಿಲು ಬೇಗನೆ ಬಿಡಾರಕ್ಕೆ ಕಳಿಸಿತು ಅನಂತನನ್ನು.

ಸಾಯಂಕಾಲ ಮ್ಯೂಝಿಯಮ್, ಝೂ (ಬಾಗಯಾಮು) ನೋಡಲು ಹೊರಟ. ಸ್ವಭಾವ ವಿರುದ್ಧವಾದ ಶಕ್ತಿಗಳನ್ನೆಲ್ಲ ಒಂದೆಡೆ ಸೇರಿಸಬೇಕೆಂದು ಮಾಡಿದ ಭಗೀರಥ ಪ್ರಯತ್ನಕ್ಕೆ ಅಗಾಧಪಟ್ಟ. ಪಂಜರದಲ್ಲಿ ಸ್ವಾತಂತ್ರ್ಯತೆಯನ್ನು ಕಳೆದುಕೊಂಡ ಮೃಗರಾಜನ ಕರುಣಾಜನಕ ಸ್ಥಿತಿ ಒಂದಿಲ್ಲೊಂದು ದಿನ ಎಲ್ಲರಿಗೂ ಪಾರತಂತ್ರ್ಯ ಒಂದು ರೂಪದಲ್ಲಿ ಬಂದೇ ಬರುವದೆಂದು ಸಾರಿದಂತೆ ಅನಿಸಿತು. ಸ್ವಭಾವಜನ್ಯ ಗುಡುಗೊಂದನ್ನು ಕೂಗಿ, ಅನಂತನ ಕಲ್ಪನೆ ಅಮರ ಸತ್ಯವೆಂದು ಸಿಂಹಿಣಿ ಸಿದ್ಧಪಡಿಸಿದಳು. ಶಹಾಮೃಗ, ಸಾರಂಗಗಳಲ್ಲದೆ ಕಸ್ತೂರಿ ಹಾಗೂ ಕಾಂಗ್ರೂ ಮೃಗಗಳನ್ನು ನೋಡಿ ನಲಿದ. ಪಶುಗಳಿದ್ದರೂ ಮಾನವರಾಗಲು ಯತ್ನಿಸುತ್ತಿರುವ ವನ್ಯಪಶುಗಳನ್ನೂ, ಮಾನವರಿದ್ದರೂ ಪಶುಗಳಾಗಿರುವ ಮನುಷ್ಯರನ್ನೂ ಅನಂತ ನೋಡಿ ನೊಂದುಕೊಂಡ. ಆಮೇಲೆ ಮಗ್ಗುಲದಲ್ಲಿಯೇ ಇದ್ದ ವಸ್ತುಸಂಗ್ರಹಾಲಯಕ್ಕೆ ಹೋದ. ಅಲ್ಲಿ ಕಂಡದ್ದು ಬರೀ ನಿರ್ಜೀವ ವಸ್ತುಗಳೇ. ಜೀವದಾನ ಬೇಡುವಂತೆ ನಿಂತಿರುವ ನೂರಾರು ಪ್ರತಿಮೆ-ಗೊಂಬೆಗಳನ್ನು ನೋಡಿ ಮನೆಯ ದಾರಿ ಹಿಡಿದ. ದಣಿದ ದಾಹ 'ವಿಕಾಜ' ಸೇರಿಸಿತು. 'ವಿಕಾಜ'ದಲ್ಲಿ ಹಸಿವು ಹಿಂಗಿಸಿ ಬಿಡಾರಕ್ಕೆ ಬಂದ.

ಮುಂದಿನ ಶಿಕ್ಷಣ ಪಡೆಯಲು ಬೀದರಕ್ಕೆ ಹೋಗುವ ಆರ್ಡರು ಬಂದಿದ್ದರಿಂದ ಜೀವನಯಾತ್ರೆಯಲ್ಲಿಯ ಹೈದ್ರಾಬಾದ ಕ್ಷೇತ್ರಯಾತ್ರೆಯನ್ನು ತೀರಿಸಿಕೊಂಡು ಮುಂದಿನ ಕ್ಷೇತ್ರವಾದ ಬೀದರಕ್ಕೆ ಹೊರಟ.

೬

ಹಳ್ಳಿಯ ಮಾದರಿಯ ಹಳೆಯ ನಿಲ್ದಾಣ. ನಿಲ್ದಾಣದ ಹೊರಗೆ ಕೆಂಗೆಂಪಿನ ಬಂಜೆ ಭೂಮಿ. ಮುಂಪೆ ನಡೆವರೆ ಗತಕಾಲದ ಗುರುತುಗಳಾದ ಬೀಳಾದ ಕೋಟೆ. ಅನಂತ ತನ್ನ ಜೊತೆಗಾರರೊಂದಿಗೆ ಹೊರಗಿನ ಟ್ರೇನಿಂಗ ಸ್ಕೂಲಿಗೆ ಹೋದನು.

ಈ ಸ್ಕೂಲಿನಲ್ಲಿ ಕೇವಲ ಪೋಲೀಸರಿಗೆ ಮಾತ್ರ ಟ್ರೇನಿಂಗ ಕೊಡುತ್ತಿದ್ದರು. ಆದರೆ ಈ ಸಲ ಯಾವದೋ ಕಾರಣಕ್ಕಾಗಿ ಸರಕಾರ ಸಬ್ ಇನಸ್ಪೆಕ್ಟರರನ್ನೂ ಇಲ್ಲಿಯೇ ಕಳಿಸಿದೆ.

ಸೌಜನ್ಯ ಸುಶಿಕ್ಷಿತೆಗಳಿಂದ ದೂರವಿದ್ದ ಜನಾಂಗದಲ್ಲಿ ಅನಂತನೂ ಒಬ್ಬನಾದ. ಮರ್ಮಭೇದಕ ಮಾತು, ಕರ್ಣಕಠೋರ ಶಬ್ದ, ಹೃದಯ ಸೀಳುವ ಹಾಸ್ಯಗಳು ಅನಂತನನ್ನು ಹತಾಶನನ್ನಾಗಿ ಮಾಡಿದವು.

ಒಂದು ಮುಂಜಾವು ಅಧಿಕಾರಿಯೊಬ್ಬ ಬಂದು " ಕಂಹಾಸೆ ಆಯಾ? " ಎಂದನು " I am from Raichur " ಎಂದ ಅನಂತ. " ನಾಮ ಕ್ಯಾ " ಎಂಬ ಬಿಂಕದ ಪ್ರಶ್ನೆಗೆ " ಅನಂತರಾವ " ಎಂಬ ಜವಾಬು ಕೊಟ್ಟ. ತಾನು ಪೋಲೀಸ ಅಮೀನನಿದ್ದರೂ ಅಧಿಕಾರಿಗಳ ವರ್ತನೆ ಹೀಗೇಕೆ? ಎಂದು ತನ್ನೊಬ್ಬ ಅನುಭವಿಕ ಸಹೋದ್ಯೋಗಿಯನ್ನು ಕೇಳಿದನು. " ಇತನಾ ಮಾಲೂಮು ನಹಿ? ಆಪ ಹಿಂದೂ ಹೈ " ಎಂದು ಸಮಾಧಾನ ಹೇಳಿದನು ಅನಂತನ ಗೆಳೆಯ.

ವಿಚಾರಿಸುತ್ತ ಕೂತಿರುವಾಗಲೇ " ಸಾಬ ಬುಲಾತೇ ಹೈ " ಎಂದು ಶಿಪಾಯಿ ಹೇಳಿದ. ಅನಂತ ಹೋಗಿ ಸಲಾಮುಕೊಟ್ಟ. " ಬೈಠೋ ಬೈಠೋ" ಎಂದು ಸಾಹೇಬರೆಂದರು. " ಕಲ ಪರೇಡ ಕೆಂವ್ ನಹೀ ಗಯೇಥೇ " ಎಂದು ಸಾಹೇಬರು ಕೇಳಿದರು. ಅನಂತ ಆಚ್ಚರಿಯಿಂದ " No sir, I had been " ಎಂದ. ಸಾಹೇಬರಿಗೂ ಆಶ್ಚರ್ಯವಾಯಿತು. ಅನಂತನನ್ನು ಸಹಿಸದ ಅನೇಕ ಮುಸಲ್ಮಾನ ಅಧಿಕಾರಿಗಳಿದ್ದರು. ಅನಂತ ಒಮ್ಮೆಲೇ ರಾಜೀನಾಮೆ ಇಟ್ಟು ಓಡಿಹೋಗಲು ಇಚ್ಛಿಸಿದನು. ಸಾಹೇಬರಿಗೂ ತನ್ನ ಸತ್ಯ

ಸಂಗತಿಯನ್ನೆಲ್ಲ ತಿಳಿಸಿದನು. ಮೇಲಿನ ಅಧಿಕಾರಿ ಮುಸಲ್ಮಾನನಿದ್ದರೂ ನಿಜ ವಾದ ಮಾನವತೆಯ ಮೂರ್ತಿಮಂತನಾಗಿದ್ದನು. ಅನುಭವದಿಂದ ಒದಗಿದ ಹಿತವಾದ ನಾಲ್ಕು ಮಾತು ಅನಂತನಿಗೆ ಹೇಳಿ ಧೈರ್ಯ ಕೊಟ್ಟ. ಎಚ್ಚರ ದಿಂದಿರಲೂ ಎಚ್ಚರಿಸಿದ.

ಈಗ ಅನಂತನಲ್ಲಿ ಆಜಗಜಾಂತರ ಬದಲಾವಣೆಯಾಗಿದೆ. ಜೀವನವು ತೀರ ಭಿನ್ನವಾಗಿದೆ. ಮೊದಲಿನ ಆಚಾರ ವಿಚಾರಗಳು ಅಳಿಸಿವೆ. ಭಾವಿಕರ ಮನೆ ಮಗನಾಗಿ ಬೆಳೆದ ಅನಂತ ನಾಸ್ತಿಕವಾದದ ನೆರಳಿನಲ್ಲಿ ನಡೆಯಹತ್ತಿ ದ್ದಾನೆ. ಆದರೆ ವ್ಯಕ್ತಿತ್ವ ಮಾತ್ರ ಹಾಗೆಯೇ ಇದೆ. ಆಹಾರ–ವಿಹಾರ, ವೇಷ–ಭೂಷಣ ಎಲ್ಲವುಗಳಲ್ಲಿಯೂ ಬದಲಾವಣೆ. ನಸುಕಿನಲ್ಲಿ ಬೂಟ ಪಾಲಿಸ್, ನಂತರ ಹಜಾಮತಿ, ತರುವಾಯ ಶ್ರಾದ್ಧನಿಯಮಕ್ಕಿಂತಲೂ ಕಠೋರವಾದ ಪರೇಡ. ಇದೆಂಥ ಬದಲಾವಣೆ !

ಹೀಗೆಯೇ ಕೆಲವು ದಿನ ಉರುಳಿದವು. ಒಂದು ರಾತ್ರಿ ಹಾಸಿಗೆಯಿಂದ ಎದ್ದವನೇ ಹಾಳಿ ಪೆನ್ನು ತೆಗೆದುಕೊಂಡ. ಲೆಕ್ಕಣಿಕೆ ' ಪ್ರಿಯ ಸರೋಜ ' ಳೆಂದು ಬರೆಯಿತು. ಹೌದು ಕೈ ಕಾಗದದ ಮೇಲೆ ಆಡದೆ ಅದೆಷ್ಟು ಅರುಣೋ ದಯಗಳು ಅರಳಿರುವವು ! ಅನಂತ–ಸರೋಜರ ಪ್ರೇಮ ಅನ್ಯೋನ್ಯವಾದ ಪ್ರೇಮ. ಧಾರವಾಡದಿಂದ ತಿಳಿಸದೆ ಬಂದದ್ದಕ್ಕಾಗಿ ಕ್ಷಮೆ ಕೋರಿದ. ನಂತರ ಗತಿಸಿದ ಸಂಗತಿ ಸನ್ನಿವೇಶಗಳನ್ನೆಲ್ಲ ಸಾದ್ಯಂತವಾಗಿ ಬರೆದ. ತನ್ನ ಸಲುವಾಗಿ ಚಡಪಡಿಸದಿರಲು ಕೋಲಳ್ಳಿಗೂ ಪತ್ರ ಬರೆದ.

ಆಗಲೇ ರಜಾಕಾರರ ಚಟುವಟಿಕೆಗಳು ತೆರೆಯ ಹಿಂದೆ ಏಳಹತ್ತಿದ್ದವು. ಜಾತಿದ್ವೇಷದ ಕಿಡಿ ಹೊತ್ತುತ್ತಲೇ ಇತ್ತು. ಆ ಬೆಂಕಿ ಕಣದ ಧೂಮ ಎಲ್ಲೆಡೆ ಯಲ್ಲಿಯೂ ಪಸರಿಸಿತ್ತು.

ಅತ್ಯವಸರದ ಮಹತ್ವದ ಕಾರ್ಯಕ್ಕಾಗಿ ಪೋಲಿಸ ಅಧಿಕಾರಿಗಳ ತರಬೇತಿನ ಒಂದು ವರ್ಷದ ಅವಧಿ ಏಳು ತಿಂಗಳಿಗೆ ಇಳಿಯಿತು. ಅನಂತನ ಟ್ರೇನಿಂಗ ಶಾಸ್ತ್ರ ಕೊನೆಗಂಡಿತು. ಇನ್ನೂ ಅದೇ ಸ್ಕೂಲಿನಲ್ಲಿಯೇ ಕೆಲಸ.

ಒಂದು ಮುಂಜಾವು. ಇನ್ನೂ ಕತ್ತಲೆಯ ಕರಿಛಾಯೆ. ಬೆಳಗಾಗಲು ಒಂದು ಘಂಟೆ ಇರಬಹುದು. " ಉಠೊ, ಕಾಮಪರ ಜಾನೇಕಾ ಸಾಬಕಾ

ಹುಕುಂ ಹೈ" ಎಂಬ ಮಾತು ಅನಂತನನ್ನು ಎಚ್ಚರಿಸಿತು. ಸಹೋದ್ಯೋಗಿಗಳ ಸಂಗಡ ಡ್ರೆಸ್ಸು ಹಾಕಿಕೊಂಡು ಗಾಡಿ ಎಳೆಯುವ ಎತ್ತಿನಂತೆ ನಡೆದು, ತಂಡವನ್ನು ಹಿಂಬಾಲಿಸಿದನು. ಕರುಳಿನ ಕರೆಗಿಂತ ಕರ್ತವ್ಯದ ಕೂಗು ಹೆಚ್ಚಿನದಲ್ಲವೆ ? ತನ್ನ ಮನ-ತನುಗಳೆಲ್ಲವೂ ಸಾಹೇಬನವೇ ಎಂದು ಕಾಲು ಜಗ್ಗುತ್ತ ದಾರಿ ತುಳಿಯುಹತ್ತಿದನು. ನಡೆಯುವ ದಾರಿ ಎಷ್ಟು ಎಂಬುದು ಯಾರಿಗೂ ತಿಳಿಯಲಿಲ್ಲ. ಒಮ್ಮೆಲೇ 'ರಾಯಿಟ್ ಟರ್ನ' ಎಂಬ ಆ್ಯಟಂ ಬಾಂಬು ಬಿತ್ತು. ಶಿಪಾಯಿಗಳನ್ನು ಹಿಂಬಾಲಿಸಿದ ಅಧಿಕಾರಿಗಳ ತಂಡ ಬಲಕ್ಕೆ ತಿರುಗಿ ಮೌನದಿಂದ ಮುಂದೆ ನಡೆಯಿತು.

'ಉರುಳಿ' ನೂರಿನ್ನೂರು ಮನೆಗಳಿದ್ದ ಸಣ್ಣ ಹಳ್ಳಿ. ಬಡತನದಿಂದ ಬಾಳುವೆ ಸಾಗಿಸುತ್ತಿರುವ ಹಿಂದುಗಳ ಕುಟುಂಬ ಐವತ್ತು ಅರವತ್ತು. ಮುಸಲ್ಮಾನರು ಅಧಿಕಾರ, ಹಣಗಳ ಗುತ್ತಿಗೆದಾರರು. ಹಳ್ಳಿಯ ಅಧಿಪತ್ಯ ಮೌಲವೀ ಸಾಹೇಬರ ಕೈಯ್ಯಲ್ಲಿತ್ತು. ಇಲ್ಲಿ ಹಿಂದೂ–ಮುಸಲ್ಮಾನರಲ್ಲಿ ತಿಕ್ಕಾಟವಾಗಿದ್ದರಿಂದ ಅಧಿಕಾರಿಗಳ ದಂಡು ಬಂದಿತ್ತು ಪೋಲಿಸರು ಸಾಹೇಬನ ಆಜ್ಞೆಗಿಂತಲೂ ಮೊದಲೇ ಹಿಂದುಗಳ ಮೇಲೆ ಹಲ್ಲೆ ಮಾಡಿ ಕೈತಿಂಡಿ ತೀರಿಸಿಕೊಂಡರು. ಎಂಟು ಹತ್ತು ಜನರನ್ನು ಸೆರೆಹಿಡಿದೂ ತಂದರು. ಸಾಹೇಬರಾದ ಡಿ. ಎಸ್. ಪಿ. ಮುಹಮ್ಮದ ಕಾದರಿಯವರು ಮೂರುನಾಲ್ಕು ಶಿಪಾಯಿ ಅಮೀನ ಹಾಗೂ ಅನಂತನನ್ನು ಕರಕೊಂಡು ಹಳ್ಳಿಯಲ್ಲಿ ಸುತ್ತಾಡಹತ್ತಿದರು. ಅವಿವೇಕತನದ ಅರಸೊತ್ತಿಗೆಯಿಂದ ಬೇಸತ್ತ ಅನೇಕ ಹಿಂದುಗಳು ಯಮನಲ್ಲಿ ದೂರಿಕೊಳ್ಳಲು ಹೋಗಿದ್ದರು. ಹಿಂದುಗಳ ಮನೆ–ಗುಡಿಸಲುಗಳು ಬೂದಿ ರೂಪದಲ್ಲಿ ನಿಂತಿದ್ದವು. ಅಳಿದುಳಿದ ಹತ್ತಿಪ್ಪತ್ತು ಹಿಂದೂ ಜನರ ಮುಖದ ಮೇಲೆ ಅಂಜಿಕೆಯ ಕಳೆ ಆವರಿಸಿತ್ತು. ಮೀರಮಿಯ್ಯಾ ಜಮಾದಾರ "ಏ ಸಾಲಾ ಹಿಂದು ಲೋಗೊಂಕು ಏ ಅಭೀ ಕಮ್ ಹೈ" ಎನ್ನುತ್ತ ರಿಪೋರ್ಟ ಬರೆದುಕೊಳ್ಳುತ್ತಿದ್ದನು. ಅನಂತನ ಕಡೆ ಕಾದರಿ ಸಾಹೇಬರೊಮ್ಮೆ ನೋಡಿದರು. ಹೃದಯದಲ್ಲಿ ಹುದುಗಿದ ಸಂತಾಪ ಅನಂತನ ಮುಖದ ಮೇಲೆ ಚಿಮ್ಮುತ್ತಿತ್ತು. ಕಾದರೀ ಸಾಹೇಬರು ವಸ್ತ್ರದಿಂದ ಕಣ್ಣು ಒರಿಸಿಕೊಂಡರು. ದಶದಿಕ್ಕುಗಳು ಸತ್ಯ ಸಂಗತಿ ಸಾರಿ ಹೇಳುತ್ತಿದ್ದವು.

ಆದರೂ ಸಾಹೇಬರು "ಹಿಂದುಗಳ ತಪ್ಪಿನಿಂದ ಅಶಾಂತಿ ಹುಟ್ಟಿತ್ತು.

ಮುಸಲ್ಮಾನ ಜನರಿಗೆ ಸರಕಾರೀ ಸಹಾಯ ಬೇಕಾಗಿತ್ತು. ನಾನು ನನ್ನ ನಾಲ್ಕು ಜನ ಅಮೀನರೊಂದಿಗೆ ಹೋಗಿ ಶಾಂತತೆ ಸ್ಥಾಪಿಸಿ ಬಂದಿರುವೆ" ನೆಂದು ಮೇಲಿನ ಅಧಿಕಾರಿಗಳಿಗೂ ಸರಕಾರಕ್ಕೂ ಬರೆದು ಕಳಿಸಿದನು.

ಅನಂತನೂ ಆ ರಿಪೋರ್ಟನ್ನು ಓದಿದ್ದರಿಂದ ಆಳವಾಗಿ ವಿಚಾರಿಸಹತ್ತಿದನು. ತನ್ನ ನಿಸ್ಸಹಾಯಕತೆಗೆ ತನ್ನನ್ನು ತಾನೇ ಹಳಿದುಕೊಂಡನು. "ಅನಂತರಾವ, ನಿಮ್ಮ ತರಕ್ಕೀ ಸಲುವಾಗಿ ನಾನೇ ಸ್ವತಃ ನಿಮ್ಮನ್ನು ರಿಕಮೆಂಡ್ ಮಾಡಿ ಕಳಿಸೀಸಿ" ಎಂದರು ಸಾಹೇಬರು. ಇಂಥ ಜಾತೀಯತೆ ತಾಂಡವವಾಡುವ ಸ್ಥಳದಲ್ಲಿ ನನ್ನಂಥ ಹಿಂದುವಿಗೆ ಹೇಗೆ ಅನುವು ಸಿಗಬಹುದು ಎಂದು ಮನದಲ್ಲಿಯೇ ಅನಂತ ವಿಚಾರಿಸಿದ. ಸಾಹೇಬರ ಆಳ ಅನಂತ ಅರಿತಿದ್ದಿಲ್ಲ ಮುಂದೇನಾದರೂ ಬಲೆ ಇರಬಹುದೇ? ಎಂದು ಧೇನಿಸುತ್ತಲೇ "ನನ್ನನ್ನು ಯಾಕೆ ಸಾಬ" ಎಂದನು. "ಕುಛ್ ನಹಿ, ತುಮಾರಾ ಕಾಮು ಮುಝೆ ಬಹುತ್ ಪಸಂದ ಆಯಾ" ಎಂಬ ತನ್ನ ಹಳವನ್ನೇ ಕಾದರಿ ಒತ್ತಿ ಹೇಳಿದರು. ಕೂಡಲೇ ಸಾಹೇಬರ ಖೋಲಿಯಲ್ಲಿ ಇಬ್ಬರು ಮೌಲ್ವಿಗಳು ಬಂದರು. ಏನೂ ಅರಿಯದ ಅನಂತ "ನನ್ನ ತರಕ್ಕಿ ಸಲುವಾಗಿ ಯಾಕೆ ಬರೆದಿರಿ ಸಾಹೇಬರ" ಎಂದನು. "ಏ ಕ್ಯಾ ಹಿಂದೂಕೆ ವಾಸ್ತೆ–ತರಕ್ಕಿಕೇಲಿಯೆ ಕೋಯೀ ನಮ್ಮ ಮುಸಲ್ಮಾನ ಇಲ್ಲೇನು" ಎಂದು ಮೌಲ್ವಿ ಕೇಳಿದರು. ಅನಂತ ಹಿಂದೂ ಇದ್ದರೂ ಮುಸಲ್ಮಾನನಾಗಲು ಸಿದ್ಧನಿದ್ದಾನೆ ಎಂದು ಅನಂತನಿಗೆ ತಿಳಿಯದ ಅರಬ್ಬೀ ಭಾಷೆಯಲ್ಲಿ ಕಾದರಿಯವರು ಹೇಳಿದಾಗ ಮೌಲ್ವಿಗಳು 'ಅಚ್ಛಾ' ಎಂದು ಅನಂತನ ಮೇಲೆ ಕೈಯಾಡಿಸಿದರು. ಕರಗಸದ ಹಲ್ಲುಗಳಿಂದ ತಿಕ್ಕಿದಂತೆ ಅನಂತನಿಗೆ ಅನಿಸಿತು. ಅನಂತ ವಿಚಾರದ ಕಂದಕದಲ್ಲಿಯೇ ಬಿದ್ದ. "ದೇಖೋ ಕಾದರಿಸಾಬ, ನಮ್ಮ ಮುಸಲ್ಮಾನರಾಗ ಒಬ್ಬ ಕಾಫರ ಇದ್ದಾನ ಅವನೇ ಇದೆಲ್ಲ ಮಾಡಿದ್ದು. ಗೋಲೀಸೆ ಮಾರನಾ ಇನಕೊ" ಎಂದ ಮೌಲ್ವೀ ಮಾತು ಅನಂತನಲ್ಲಿ ಹೊಸ ಬೆಳಕಿನ ಛಾಯೆ ನೀಡಿತು. ಆ ದಿವ್ಯ ಪುರುಷನ ದರ್ಶನ ಪಡೆಯಲು ಅನಂತ ಆತುರಪಟ್ಟ. ಪರಿಸ್ಥಿತಿ ಅವನನ್ನು ತಡೆಹಿಡಿಯಿತು.

ಅನಂತ ತನ್ನ ಟೆಂಟಿಗೆ ಬಂದ. ನಡೆದ ಸಂಗತಿಯನ್ನೆಲ್ಲ ತನ್ನ ದಿನಚರಿಯಲ್ಲಿ ತುಂಬಿದನು. ಆ ಮೇಲೆ ತಾನೊಬ್ಬನೇ ಊರಲ್ಲಿ ಅಡ್ಡಾಡಿ ಹಿಂದುಗಳನ್ನು

ಸಾಂತ್ವನಗೊಳಿಸಿದನು. "ಯಪ್ಪಾ, ನಾವೆಲ್ಲಾರೂ ಸಾಯತಿದ್ವಿರ್ರಿ, ಆವರ ಮುಸಲಮಾನರ ಪೈಕೀನ ಒಬ್ಬ ಮಾರಾಯ ನಮ್ಮಪ್ಪ ಇದ್ದಾನ್ರಿ, ಅವನ ನಮ್ಮನ್ನ ಉಳಿಸಿದಾ. ಅವನ ಹೊಟ್ಟೆ ಥಣ್ಣಗಿರಲಿ. ಸಾಹೇಬರ ಅವನ ಕೊಲ್ಲಾಕ ಈಗ ಇವರು ನಡೆಸ್ಯಾರ" ಎಂದ ಹಿಂದೂ ಮುದುಕನೊಬ್ಬ. ಅವನನ್ನು ಕಾಣಲು ಅನಂತ ಕಾತರಿಸುತ್ತ ಪುನಃ ತನ್ನ ಠಾಣೆಗೆ ಬಂದ. ಊಟಕ್ಕೆ ಕೂತಿದ್ದ. "ಸಾಬ ಬುಲಾತೆ ಹೈ" ಎಂಬ ಮಾತು ಮೇಲೆ ಬ್ಬಿಸಿತು.

ಸಾಹೇಬರ ಮುಂದೆ ಸಲಾಂ ಮಾಡಿ ನಿಂತ. ಅನಂತನಲ್ಲಿ ಸಾಹೇಬರ ಬಗ್ಗೆ ಸಾವಿರ ವಿಚಾರಗಳಿದ್ದವು. ಸಾಹೇಬರು ಕತ್ತೆತ್ತಿ "ಜೈಹಿಂದ್" ಎಂದರು. ಜವಾನನನ್ನೂ ಸಾಹೇಬರು ಹೊರಗೆ ಕಳಿಸಿದ್ದರಿಂದ ಸಾಹೇಬರ ಖೋಲಿಯಲ್ಲಿ ಅನಂತ ಕಾದರಿ ಇಬ್ಬರೇ ಉಳಿದರು. ಸಾಹೇಬರು ಅತ್ತಿತ್ತ ಸುತ್ತಾಡಿ ಎಲ್ಲೆಡೆಗೂ ನೋಡಿ ಬಂದು, ಗಾಬರಿಯಾದವರಂತೆ ಕ್ಷಣಹೊತ್ತು ಕುಳಿತರು. ಅನಂತನಲ್ಲಿ ಅಂಜಿಕೆ ಹುಟ್ಟಿತು. ಒಮ್ಮೆಲೇ ಬಾಗಿಲಗಳು ದಡ ದಡಯೆಂದವು. ಸಾಹೇಬರು ಬಾಗಿಲ ತೆಗೆಯಲು ಏಳುವ ಮೊದಲೇ ಅನಂತ ತಾನೇ ಬಾಗಿಲ ತೆರೆದ. ಆ ವ್ಯಕ್ತಿ ಒಳಗೆ ಬರಲು ಪುನಃ ಬಾಗಿಲು ಹಾಕಿ ಕೊಂಡ. ಸುಮಾರು ಮೂವತ್ತು ವರುಷದ ಯುವಕ. ಗೇಣುದ್ದ ಗಡ್ಡ. ತೆಳುವಾದ ಮಲ್ಲಿನ ಬನಿಯನು ಧರಿಸಿದ್ದಾನೆ. ಅದರ ಮೇಲೆ ಬಿಗಿಯಾಗಿ ಕೂತ ಕರಿಯಬಣ್ಣದ ಜಾಕೀಟು. ಕೈಯಲ್ಲಿ ಬಾಯಿ ತೆರೆದ ಪಿಸ್ತೂಲು. ಆ ವ್ಯಕ್ತಿಯನ್ನು ನೋಡಿದ ಕೂಡಲೇ ಅನಂತನ ದೇಹದಲ್ಲಿ ವಿದ್ಯುತ್ ಸಂಚಾರವಾದಂತಾಯಿತು. ಎಲ್ಲಿಯೋ ನೋಡಿದ ಹಾಗೆ ಭಾಸವಾಯಿತು. ಸಾಹೇಬರಿದ್ದಿದ್ದರಿಂದ ಬಂದ ಭಾವನೆಗಳನ್ನೆಲ್ಲ ಒತ್ತಿಕ್ಕಿಕೊಂಡ. ಇಬ್ಬರೂ ಮುಸಲ್ಮಾನರೇ ಕೂಡಿದ್ದರಿಂದ ಅನಂತನ ಹೃದಯದ ಬಡಿತ ಹೆಚ್ಚಾಯಿತು. ಆದರೆ.... ? "I can understand your feeling Anantarao" ಎಂಬ ಸಾಹೇಬರ ಇಂಗ್ಲೀಷು ಮಾತು ಕೇಳಿ ಅನಂತ ದಿಗಿಲುಗೊಂಡ. ಸಾಹೇಬರು ಏನೋ ಜಾದು ನಡೆಸಿರಬಹುದೆಂದು ಭಾವಿಸಿದ. "I am helpless Mr, Anant" ಎಂದು ಸಾಹೇಬರು ಪುನಃ ಉಚ್ಚರಿಸಿದರು. ಕೂಡಲೇ ಮಗ್ಗುಲಲ್ಲಿ ನಿಂತಿದ್ದ ಇನ್ನೊಬ್ಬ ಮಹಮ್ಮದೀಯ "ನನ್ನ ಜೀವ ರಕ್ಷಿಸಲು

ಏನು ಉಪಾಯ ಮಾಡೀರಿ ಸಾಹೇಬರ, ನಿರಪರಾಧಿ ಹಿಂದುಗಳಿಗೆ ಸಹಾಯ ಮಾಡಿದ್ದಕ್ಕೆ ನನ್ನ ಬಾಂಧವರು ನನ್ನನ್ನು ಕೊಲ್ಲುವ ಯತ್ನ ನಡೆಸಿದ್ದಾರೆ. ನಾನೂ ಮುಸಲ್ಮಾನ, ಲೇಕಿನ ಕೋನಸಾ ಕಿತಾಬಮೆ ಏ ಸೈತಾನಿ ಕಾಮು ಕರನೆಕೋ ಲಿಖೇ ಹೈ" ಎಂದನು.

"ಮೈ ಲಾಚಾರ ಹೂ ಮೈ ಕ್ಯಾ ಕರು?" ಎಂದರು ಸಾಹೇಬರು. ಆಗ ಅನಂತನ ಆಶ್ಚರ್ಯ ಅಧಿಕವಾಯಿತು. 'ಸಾಬ' ಎಂದು ಅನ್ನುತ್ತಿರು ವಾಗಲೇ ಬಾಗಿಲದ ಹೊರಗೆ ಭಯಂಕ ಗೊಂದಲ ಕೇಳಿಸಿತು. ಬಾಗಿಲು ತೆಗೆದ. ಮೂವರು ಮುಸ್ಲಿಮ ಗುರುಗಳು ಎದುರು ಕಂಡರು. ಅವರ ಮುಖ ಗಳು ಉರಿಯುತ್ತಿದ್ದವು. ಹೊರಗಡೆ ಇನ್ನೂ ಎಂಟು ಹತ್ತು ಮುಸ್ಲಿಮ ಸೇವಕರ ತಂಡ ನಿಂತಿತ್ತು. ಗುರುಗಳ ಕೆಂಪು ನಿಲುವಂಗಿಯೂ ಗೇಣು ದ್ದದ ಗಡ್ಡಗಳೂ ಮೌಲ್ವಿಗಳ ಕ್ರೌರ್ಯತನವನ್ನು ಸಾರಿ ಹೇಳುತ್ತಿದ್ದವು.

ಸಾಹೇಬರು ಹಸ್ತಾಂದೋಲನ ಮಾಡಿ "ದೇಖಿಯೇ ಏ ಸಾಲಾಕೋ ಗಿರಫದಾರ ಕಿಯಾ ಹುಂ" ಎಂದು ಅನಂತನ ಮಗ್ಗುಲಲ್ಲಿಯೇ ನಿಂತಿದ್ದ ದುಃಖಿ ವ್ಯಕ್ತಿಯನ್ನು ತೋರಿಸಿದರು. ಮೌಲ್ವಿಗಳು ಆ ವ್ಯಕ್ತಿಯನ್ನು ಒದ್ದು "ಖುದಾ ಹಾಫೀಜ" ಎಂದೆನ್ನುತ್ತ ಹೊರಟರು. ಮುಂದೆ ಸಾಹೇಬರು ಆ ವ್ಯಕ್ತಿಗೆ ಪಾರಾಗಲು ಹೇಳಿದರು. ವ್ಯಕ್ತಿ ಅದೃಶ್ಯವಾಯಿತು. "ಅನಂತಾ, ನಾನು ಮುಸಲ್ಮಾನ, ಈ ಮುಸಲ್ಮಾನರ ವಿರುದ್ಧ ಹೋದರೆ ನನ್ನ ನವಕರಿ ಯಾಕೆ ಜೀವ ಸಹಿತ ಹೋಗುತ್ತದೆ. ಸರಕಾರವೇ ಅವರದು. ನಿನ್ನ ಜೀವಕ್ಕೆ ನನ್ನ ಜೀವ ಮೀಸಲಿದೆ. ನೀನು ಮಾತ್ರ ಎಚ್ಚರಿಕೆಯಿಂದಿರು. ನಾನು ಎಲ್ಲಿದ್ದರೂ ಗುಪ್ತವಾಗಿ ಓಲೆ ಬರೆ." ಎಂದು ಸಾಹೇಬರು ಅನಂತನ ಕಿವಿ ಯಲ್ಲಿ ಹೇಳಿದರು. ಸಾಹೇಬರ ನಿರ್ಮಲ ಮನಕ್ಕೆ ಅನಂತ ವಂದಿಸಿದ. ಒಬ್ಬ ರಿಗೊಬ್ಬರು ಅಪ್ಪಿಕೊಂಡರು. ಸಾಹೇಬರ ಕಣ್ಣು ಹನಿಗಳಿಂದ ತೊಯ್ದವು.

ಉರುಳಿಯಲ್ಲಿ ಅನಂತನನ್ನೇ ನಿಯಮಿಸಿ, ಕೈಯಲ್ಲಿ ನಾಲ್ಕಾರು ಶಿಪಾ ಯರನ್ನು ಕೊಟ್ಟು ಡಿ. ಎಸ್. ಪಿ. ಕಾದರಿಯವರು ಬೀದರಿಗೆ ಬಿಜಯಂ ಗೈದರು.

ಅನಂತನಿಗೆ ಮೈತುಂಬ ಕೆಲಸ. ಹಗಲಿರುಳೂ ದುಡಿತ. ಕೈಯಲ್ಲಿಯ

ಪೋಲೀಸರೂ ಅನಂತನ ವಿರುದ್ಧ. ಒಂದು ರಾತ್ರಿ ಒಬ್ಬನೇ ಗಸ್ತಿ ತಿರುಗಹತ್ತಿದ್ದಾನೆ. ದಾರಿಯಲ್ಲಿ ಒಮ್ಮೆಲೆ ಹೃದಯ ಭೇದಿಸುವ ನಗೆ ಕೇಳಹತ್ತಿದವು. ಪಿಶಾಚಿಗಳ ಚೇಷ್ಟೆಯಿರಬಹುದೆಂದು ಬಗೆದು "ಜೈ ಗುರುದೇವ" ಎನ್ನುತ್ತ ಮುಂದೆ ನಡೆದ. ಆದರೆ ನಕ್ಕವರು ಮಾನವ ಪಿಶಾಚಿಗಳಾಗಿದ್ದರು. ಅನಂತನ ಮೈಮೇಲೆ ಒಮ್ಮೆಲೇ ಏರಿದರು. ಕಿಸೆಯಲ್ಲಿಯ ಪಿಸ್ತೂಲು ತೆಗೆಯಹೋದ. ಕೈಗಳೂ ಕಟ್ಟಲ್ಪಟ್ಟವು. ಕಣ್ಣುಗಳಿಗೂ ಅರಿವೆ ಬಿಗಿದರು.

ಒಂದು ಹಾಳುಮನೆಗೆ ಒಯ್ದು ಅರಿವೆ ಬಿಚ್ಚಿದರು; ಕಣ್ಣು ತೆರೆದ; ಅಪರಿಚಿತ ಕ್ರೂರ ವ್ಯಕ್ತಿಗಳು. ಅಸಹ್ಯ ಚೇಷ್ಟೆಗಳನ್ನು ನಡೆಸಿದ್ದಾರೆ. ಅವರ ಹಾವಭಾವ, ಮಾತಿನ ವೈಖರಿಗಳು ಜೀವ ಗಂಡಾಂತರದಲ್ಲಿದೆಯೆಂದು ಅನಂತನಿಗೆ ಹೇಳಿದವು. ಅನಂತ ಕಲ್ಪಿಸಿದ್ದ ಕತೆಗಳೆಲ್ಲ ಗಾಳಿಗೋಪುರಗಳಾದವು. ಈ ವಿಷಮಯ ಪ್ರಸಂಗದಲ್ಲಿ ಪಾರುಮಾಡುವ ವ್ಯಕ್ತಿ ಆ ಅವ್ಯಕ್ತ ಅನಿಮಿತ್ತ ಬಂಧು ಒಬ್ಬನೇ ಎಂದು "ಆಪತ್ ಬಾಂಧವಾ" ಎಂದನು.

ಅನಂತನ ಆರ್ತನಾದಕ್ಕೆ ಓಗೊಟ್ಟು ಪರಮಾತ್ಮ ಒಬ್ಬ ವ್ಯಕ್ತಿಯನ್ನು ಕಳಿಸಿದ. ಅನಂತ ಸೆರೆಬಿದ್ದ ಮನೆ ವಿಶಾಲವಾಗಿತ್ತು. ಸುತ್ತಲೂ ಸ್ವಯಂ ಸೇವಕರ ಕಾವಲು. ಅನಂತನ ಶಿಪಾಯಿ ಇಮಾಮನೇ ಅವರ ಮುಂದಾಳು. "ಕೈಸಾ ಹೈ ಸಾಬ" ಎಂದು ಇಮಾಮ ನಕ್ಕನು. ನಗಲೂ ಅಥವಾ ಅಳಲೂ ಅನಂತ ಅಸಮರ್ಥನಾಗಿದ್ದ. ಒಮ್ಮೆಲೇ ಬಾಗಿಲು ಬಿದ್ದ ಸಪ್ಪಳವಾಯಿತು. ಅಂದು ಸಾಹೇಬರಲ್ಲಿ ರಕ್ಷಣೆ ಕೇಳಬಂದಿದ್ದ ವ್ಯಕ್ತಿಯೇ ಅನಂತನೆದುರು ನಿಂತಿತು. ಮೌಲವಿಗಳೆಲ್ಲ ಮುಗಿಲ ಕಡೆ ನೋಡಹತ್ತಿದರು. 'ಬದ್ಮಾಷ್' ಎಂದು ಆ ವ್ಯಕ್ತಿ ನುಡಿಯುವ ಮೊದಲೇ ಖೋಲಿಯ ತುಂಬ ಮದ್ದಿನ ವಾಸನೆ ಇಡುಗಿತು. ಅನಂತ ತುಸು ಹೊತ್ತು ಕಣ್ಣು ಮುಚ್ಚಿದನು.

ಅನಂತ ಕಣ್ಣು ತೆರೆದು ನೋಡಿದಾಗ ತಾನು ಅವ್ಯಕ್ತ ವ್ಯಕ್ತಿಯ ತೋಳುತೆಕ್ಕೆಯಲ್ಲಿ ಇದ್ದನು. ಕೂಡಲೆ ಅವನಿಗೆ ಶಿರಬಾಗಿ ನಮಿಸಿದನು. ಇದ್ದ ಒಬ್ಬಿಬರು ಆ ವ್ಯಕ್ತಿಯ ಪಾದಗಳ ಮೇಲೆ ಬಿದ್ದರು. ಆ ವ್ಯಕ್ತಿ ಸರ್ರನೆ ಹೊರಟು ಹೋಯಿತು. ಬದುಕಿ ಬಾಳುವ ಆಶೆ ಎಲ್ಲವೂ ಬಯಲಾಗಿ, ಜೀವನದ ಜ್ಯೋತಿಯೇ ನಂದುವಾಗ ಕಾಣಿಸಿಕೊಂಡು, ಜೀವಜ್ಯೋತಿಗೆ ಆಶೆಯ ತೈಲ

ವನ್ನು ನೀಡಿ, ಜ್ಯೋತಿ ಮಿನುಗುವಂತೆ ಮಾಡಿದ ಮಹಾತ್ಮನಾರೆಂದು ವಿಚಾರಿಸುತ್ತಲೇ ಬಿಡಾರಕ್ಕೆ ಬಂದ.

ನಡೆದದ್ದೆಲ್ಲವನ್ನೂ ಮೇಲೆ ಬರೆದು ಕಳಿಸಿದ. "ಅಲ್ಲಿ ಶಾಂತತೆ ನೆಲೆಸಿದೆ. ಬೀದರಿಗೆ ಬಾ" ಎಂದು ಮೇಲಿನ ಆರ್ಡರು ಬಂತು. ತನ್ನನ್ನು ರಕ್ಷಿಸಿದ ವ್ಯಕ್ತಿಯನ್ನು ಮನವಾರೆ ನೋಡಲಿಲ್ಲ ಎಂದು ಮಿಡುಕುತ್ತ ಅನಂತ ಬೀದರಿಗೆ ನಡೆದ.

## ೧೨

ಬೀದರಿಗೆ ಬಂದಾಗ ಪ್ರೊಮೋಶನ್ನು ಸಿಕ್ಕ ಸಂಗತಿ ತಿಳಿಯಿತು. ಕಾದರಿ ಸಾಹೇಬರನ್ನು ಮನವಾರೆ ಹೊಗಳಿದನು. ಕರ್ತವ್ಯನಿಷ್ಠೆಯಿಂದಲೂ ಕಾರ್ಯಚಾಪಲ್ಯತೆಯಿಂದಲೂ ತನ್ನ ಶಾಖೆಯಲ್ಲಿ ಹೆಸರು ಗಳಿಸಿದನು. ಅಧಿಕಾರಿಗಳ ಸಂಗಡ ಜನತೆಗೂ ಬೆಲ್ಲವಾದನು.

ಆದರೂ ಪೋಲೀಸ ಖಾತೆಯಲ್ಲಿ ಜಾತಿಯೇ ಒಂದು ಗುಣಪತ್ರವಾಗಿತ್ತು. ಅನಂತನಿಗೆ ದೊರೆತಿದ್ದ ಅಧಿಕಾರ ಹೊಯ್ದಾಡುತ್ತಲೇ ಇತ್ತು. ಅನಂತನಿಗೂ ಅದರ ಅರಿವಿತ್ತು. ಆದರೆ ಡಿ. ಎಸ್. ಪಿ. ಕಾದರಿಯವರ ರಕ್ಷಾಕವಚ ಅವನ ಬೆಂಗಾವಲಿಗಿತ್ತು.

ಧಾರವಾಡವನ್ನು ಅನಂತ ಬಿಟ್ಟಂದಿನಿಂದ ನಡೆದ ವಿಷಯಗಳ ಬಗ್ಗೆ ಸರೋಜಳ ವಿಸ್ತಾರವಾದ ಓಲೆ ಬಂತು. ಕೋಲಳ್ಳಿಯಿಂದಲೂ ಕಾಗದ ಬಂದಿತ್ತು. ಅನಂತ ಕಳಿಸುತ್ತಿದ್ದ ಹಣ ವೆಂಕಟರಾಯರ ಬಡತನವನ್ನು ಹಿಂಗಿಸಿದ್ದರಿಂದ ಅವರಿಗೆ ಆನಂದವಾಗಿತ್ತು.

ತುಸು ದಿವಸಗಳಲ್ಲಿಯೇ ಅನಂತನ ಸಾಹೇಬರಾಗಿದ್ದ ಮಹಮ್ಮದ ಕಾದರಿಯವರಿಗೆ ಹೆಚ್ಚಿನ ಹುದ್ದೆಯ ಮೇಲೆ ಹೈದರಾಬಾದಿಗೆ ವರ್ಗವಾದ ಆರ್ಡರು ಬಂದಿತು. ಅವರ ಅಗಲುವಿಕೆಗಾಗಿ ಬಹುಜನ ಮಿಡುಕಿತು. ಅನಂತ

ನಿಗಂತೂ ವಿಶೇಷ ಕಳವಳವಾಯಿತು. ಜಾತಿಯಿಂದ ಬೇರೆ ಇದ್ದರೂ ಸಾಹೇಬರು ಅನಂತನಿಗೆ ತಂದೆಯ ಸ್ಥಾನದಲ್ಲಿದ್ದರು. ಅನಂತನೆಂದರೆ ಸಾಹೇಬರಿಗೆ ಅತಿ ಹಿಗ್ಗು.

ಕಾದರಿಯವರಿಗೆ ಬೀಳ್ಕೊಡುವ ಸಮಾರಂಭ ನಡೆಯಿತು. ಎಲ್ಲರೂ ಅವರ ಗುಣಗಾನ ಮಾಡಿದರು. ಅಂದು ಅನಂತನ ಜೀವ ಬದುಕಿಸಿದ ತರುಣನೂ ಸಾಹೇಬರ ಬಗ್ಗೆ ಮಾತನಾಡಿದನು. ಅಗಲುವಿಕೆ ಅನಂತನನ್ನು ಮೂಕನನ್ನಾಗಿ ಮಾಡಿತು.

ಸಾಹೇಬರು ಸಂಗಡವೇ ಅನಂತನನ್ನು ಮನೆಗೆ ಕರೆದುಕೊಂಡೇ ನಡೆದರು. "ಅನಂತರಾವ, ಇವರಾರು ಗೊತ್ತೊ?" ಎಂದು ಕೇಳಿದರು. "ಇಲ್ಲ" ಎಂದ ಅನಂತ. "ನನಗೆ ಮಾತ್ರ ಪರಿಚಯವಿದ್ದ ಹಾಗಿದೆ" ಎಂದ ಅಲ್ಲಿ ನಿಂತಿದ್ದ ಅಜ್ಞಾತ ವ್ಯಕ್ತಿ. "ಎಲ್ಲಿ" ಎಂದ ಆಶ್ಚರ್ಯದಿಂದ ಅನಂತ. "ಹಾವೇರಿ ಸಾಲೆಯಲ್ಲಿ" ಎಂದಾಗ ಸಂತೋಷ ಉಕ್ಕಿ "ರಹೀಮ" ಎಂದ ಅನಂತ. ಅನಂತ ರಹೀಮರ ದೇಹಗಳು ಒಂದಾದವು. ಹೃದಯಗಳು ಬೆರೆತವು. ಎಲ್ಲವನ್ನೂ ನೋಡುತ್ತಿದ್ದ ಕಾದರೀ ಸಾಹೇಬರ ಸಂತೋಷ ಮೇರೆ ಮೀರಿತು. "ಅನಂತ, ನಾ ಹೋದರೂ ನಿನ್ನ ಯೋಗಕ್ಷೇಮ ನೋಡಲು ಇನ್ನೊಬ್ಬನು ಸಿಕ್ಕನಲ್ಲವೇ?" ಎಂದರು ಸಾಹೇಬರು. ಅನಂತ ರಹೀಮರು ಸಾಹೇಬರಿಗೆ ಸಲಾಂ ಮಾಡಿ ಅನಂತನ ಮನೆಗೆ ಬಂದರು.

ಅನಂತನಿಗೆ ಈ ದಿನ ಸುದಿನವಾಗಿತ್ತು. ಪರ್ವಕಾಲವಾಗಿತ್ತು. ಏಳು ವರುಷಗಳ ತರುವಾಯ ಗೆಳೆಯ ರಹೀಮನ ಭೆಟ್ಟಿ. ಎಂಥ ವಿಧಿಯಾಟವಿದು! ಅಂದು ಹಾವೇರಿಯ ಶಾಲೆಯ ನಾಲ್ಕನೇ ಇಯತ್ತೆಯಲ್ಲಿದ್ದ ರಹೀಮನು ಸಾಹೇಬರ ಸಂಗಡ ಉರುಳಿಯಲ್ಲಿ ಭೆಟ್ಟಿಯಾಗಿ, ಅನಂತನ ಜೀವನವನ್ನೇ ಉಳಿಸಿದ್ದ. ಕ್ಷಣಕಾಲ ಅನಂತ ತನ್ನನ್ನೇ ತಾನು ಮರೆತನು. ಏಳು ವರುಷಗಳ ಸಿಂಹಾವಲೋಕನ ನಡೆಯಬೇಡವೆ? ವಿಮಲೆಯು ದೊಡ್ಡವಳಾಗಿ ಮದುವೆಯಾದದ್ದನ್ನು ಅನಂತ ಹೇಳಿದಾಗ ರಹೀಮ 'ಆಂ' ಎಂದನು. ಧಾರವಾಡದಲ್ಲಿ ಆರಂಭವಾಗಿದ್ದ ತನ್ನ ಪುರಾಣವನ್ನೂ ವಿವರಿಸಿದ. ಕೋಲಳ್ಳಿಯಲ್ಲಿಯ ಎಲ್ಲ ಸಂಗತಿ ತಿಳಿಸಿದ. ಲಚ್ಚಮ್ಮನ ಮರಣ, ಮಲ್ಲ ಊರು ಬಿಟ್ಟದ್ದು, ವಾಣೀ

ವಿಹಾರ ಆರಂಭಿಸಿದ್ದು ಎಲ್ಲವೂ ಅವರ ಚರ್ಚೆಯಲ್ಲಿ ಹಾದುಹೋದವು. ತನ್ನವ ರಾರೂ ಇಲ್ಲವೆಂದು ಚಿಂತಿಸುತ್ತಿರುವ ಅನಂತನಿಗೆ ಜೀವಕ್ಕೆ ಜೀವ ಕೊಡುವ ರಹೀಮನು ದೊರೆತದದ್ದು ಭಾಗ್ಯವಲ್ಲದೆ ಮತ್ತೇನು ? ಅದೆಷ್ಟೋ ಹೊತ್ತು ಮಾತುಕತೆಯಾದ ಬಳಿಕ " ಮತ್ತೆ ಬರುವೆ "ನೆಂದು ಹೇಳಿ ರಹೀಮ ಮನೆಗೆ ಹೋದ.

ಅನಂತ ಒಬ್ಬನೇ ಬಿಃಬತ್ತಿಯ ತೆರೆಗಳನ್ನು ತರಂಗತರಂಗವಾಗಿ ತೇಲಿ ಸುತ್ತ ಕುಳಿತುಕೊಂಡ. ವಿಚಾರಗಳು ಸುಳಿಸುಳಿಯಾಗಿ ಏಳಹತ್ತಿದವು. ಶಿಕ್ಷಣ ಗಳಿಸುವಾಗ ಪಟ್ಟ ಕಷ್ಟ, ವ್ಯಯವಾದ ಹಣ ಇಂದು ಸಾರ್ಥಕವಾಯಿತೆಂದು ಭಾವಿಸಿದನು. ಹಕ್ಕಿಯ ಹಾಗೆ ರೆಕ್ಕೆಗಳಿದ್ದರೆ ಹಾರಿ ಹೋಗಿ ತಾಯಿಗೆ ಈ ಸುದ್ದಿಯನ್ನು ಅನಂತ ನಿಮಿಷಾರ್ಧದಲ್ಲಿ ಮುಟ್ಟಿಸಬಹುದಿತ್ತು. ಆದರೆ ಪಕ್ಕ ಗಳಿಲ್ಲದ ನಿರ್ಜೀವ!ಹಕ್ಕಿಯಾದ ಕಾರ್ಡುಗಳಲ್ಲಿ ಬರೆದು, ತಾಯಿ ತಂದೆಗೆ ತಿಳಿಸಲು ಡ್ರಾ ತೆಗೆದು ಕಾರ್ಡು ನೋಡಿದನು. ಕಾರ್ಡುಗಳು ತೀರಿದ್ದವು. ಅನಂತನಿ ಗೇಕೋ ಕೆಡುಕೆನಿಸಿತು.

ಶಿಪಾಯಿ ಅಂದಿನ ಟಪಾಲುಗಳನ್ನೆಲ್ಲ ತಂದಿಟ್ಟ. ಅನಂತ ಒಂದೊಂ ದನ್ನೇ ಅವಲೋಕನ ಮಾಡಹತ್ತಿದ. ಹೈದ್ರಾಬಾದಿನ ಸರಕಾರದಿಂದ ಬಂದ ಪಾಕೀಟೇ ಮೊದಲು ಸಿಕ್ಕಿತು. ಒಡೆದ. ಅನಂತನಿಗೆ ಆನಂದ ಕಟ್ಟುಮೀರಿ ಹರಿಯಿತು. ಎದುರಿನಲ್ಲಿಯೇ ಇದ್ದ ರಾಯರ ಫೋಟೊ ತಲೆಯಮೇಲಿಟ್ಟು ಕೊಂಡ. ಕೆಲಹೊತ್ತು ಉಳಿದ ಕಾಗದ ಪತ್ರ ನೋಡುವದನ್ನೇ ಮರೆತ. ಪುನಃ ತಾನು ಅಸಿಸ್ಟಂಟ ಡಿ. ಎಸ್. ಪಿ. ಹುದ್ದೆಗೆ ಏರಿದ ವಾರ್ತೆಯನ್ನು ಓದಿದ. ಯಾರಿಗೆ ಆನಂದವಾಗಲಿಕ್ಕಿಲ್ಲ! ತಂದೆ–ತಾಯಿಗಳನ್ನೂ, ವಿದ್ಯೆ ಕಲಿ ಸಿದ ಗುರುಗಳನ್ನೂ ಮನದಲ್ಲಿಯೇ ನೆನೆದ. ಆದರೆ ಇಷ್ಟು ಬೇಗನೇ ಈ ದೊಡ್ಡ ಸ್ಥಳ ಹೇಗೆ ದೊರೆಯಿತೆಂಬುದೇ ಅವನ ವಿಚಾರಕ್ಕೆ ನಿಲುಕ ದಾಯಿತು. ಉಕ್ಕೇರಿದ ಅನಂತನ ಆನಂದ ದೇಹದ ಕಣಕಣಗಳ ಲ್ಲಿಯೂ ಕಾಣಿಸಿಕೊಂಡಿತು. " ಈ ಆನಂದದ ಸುದ್ದಿ ಯಾರಿಗೆ ಹೇಳಲಿ ? " ಎಂದ.

" ಅಸಿಸ್ಟಂಟ ಡಿ. ಎಸ್. ಪಿ. ಅನಂತರಾವ್ " ಎಂದು ಕೂಗುತ್ತ

ರಹೀಮ ಬಂದ. ಅನಂತ ಓಡಿಹೋಗಿ ಅಪ್ಪಿಕೊಂಡ. ಅನಂತನ ಆನಂದ ದಲ್ಲಿ ಭಯ್ಯಾ ಸಮಭಾಗಿಯಾದ. "ನಿನಗೆ ಹೇಗೆ ಗೊತ್ತಾತು?" ಎಂದ ಅನಂತ. "ನಾ ಅಂದರ ಏನ ತಿಳಿದಿದ್ಯೋ ಅನಂತ. ಅಲ್ಲ ಕ್ಷಮಿಸು ಅನಂತರಾವ" ಇಬ್ಬರೂ ನಕ್ಕರು. ಪುನಃ "ನಮ್ಮ ಕಾದರಿ ಸಾಹೇಬರ ಮಾವನೇ ಆಯ್. ಜಿ. ಪಿ. ಇದ್ದಾರೆ. ನನಗೆ ಕಾದರಿಯವರು ಹೋಗುವ ಮುಂದೆ ಹೇಳಿಯೇ ಹೋಗಿದ್ದರು. ಅದಲ್ಲದೆ ನೋಡು ಅನಂತಾ, ಈ ಖಾತೇ ದಾಗ ಬಿ. ಎ. ತನಕ ಕಲಿತವರೂ ಕಡಿಮಿ. ವ್ಯಾಲೆ ನೀನು ಮುಸಲ್ಮಾನ ಆಗತಕ್ಕವ" ಎಂದ ರಹೀಮ. ಅನಂತ "ಏನು?" ಎಂದ. "ಜೋಕೆ ನಾವು ಹಾಗೇ ಎಲ್ಲ ಆಫೀಸರರಿಗೆ ಹೇಳೀವಿ. ಯಾರಾದರೂ ಕೇಳಿದ್ರ ಮುಸ ಲ್ಮಾನ ಆಗತೀನಿ ಅನ್ನು. ಮುಂದಃ ದೇವರ ಇದ್ದಾನ" ಎಂದು ಹೇಳಿ ರಹೀಮ ಕೆಲಸವಿದ್ದದ್ದರಿಂದ ಮಸೀದೆಗೆ ಹೋದನು.

ಎಲ್ಲವೂ ಅನಿಶ್ಚಿತ. ಚಂಚಲತೆಯು ಪ್ರಕೃತಿಯ ನಿತ್ಯಧರ್ಮ. ಮೊದ ಲಿನ ಆನಂದದ ತೆರೆ ತೇಲುವ ಮೊದಲೇ ಸಂತಾಪದ ತೆರೆಯೊಂದು ಅದರಲ್ಲಿ ಸೇರಿಕೊಳ್ಳುವದು ದೈವದುರ್ವಿಪಾಕ.

ಉಳಿದ ಕಾಗದಪತ್ರಗಳ ಮೇಲೆ ಅನಂತ ರಿಮಾರ್ಕು ಬರೆಯಹತ್ತಿದನು. ಕೋಲಳ್ಳಿಯ ಓಲೆ ಇನ್ನಿಷ್ಟು ಆನಂದವನ್ನು ಹೆಚ್ಚಿಸಿತು. ಗಡಿಬಿಡಿಯಿಂದ ಓಲೆ ಒಡೆದನು. ಹೃದಯಃಶೂನ್ಯ ಮಾಡುವ ಸಂಗತಿಯೊಂದು ಬಂದಿದೆ ಯೆಂಬುದನ್ನು ಪಾಪ ಅನಂತನೇನು ಬಲ್ಲ! ಓದುತ್ತಿರುತ್ತಲೇ ನೆಲಕ್ಕೆ ಬಿದ್ದ. ಹದಿನೈದು ನಿಮಿಷಗಳ ಹಿಂದಿನ ಆನಂದದ ಝುರಿ ಬತ್ತಿತು. ಸಂತಾಪ ಉಕ್ಕೇ ರಿತು. ಕಣ್ಣು ಮೂಗುಗಳಲ್ಲಿ ದುಃಖ ಕಾಣಿಸಿಕೊಂಡಿತು. ಗರಿಗೆದರಿ ನಲಿ ದಾಡಿದ ಮನಹಂಸ ಮ್ಲಾನವಾಯಿತು. ತಾಯಿಯ ಮರಣ ವಾರ್ತೆಯನ್ನು ತಂದ ಅಂಚೆ ಅನಂತನ ಜೀವತಂತಿಗಳನ್ನೆಲ್ಲ ನಿರ್ಜೀವ ಮಾಡಿತು. ಬಗಲ ಗೂಸಿನಂತೆ ಬಿಕ್ಕಿ ಬಿಕ್ಕಿ ಅಳಹತ್ತಿದ. ಮಾತೃದೇವಿಯ ಮರಣ ಮಗನನ್ನು ಹಸುಗೂಸನ್ನಾಗಿ ಮಾಡಿತು. ತಾಯಿಯ ಪ್ರೇಮರಸ ಅಶ್ರುರೂಪದಲ್ಲಿ ಇಳಿ ಯಿತು. ಸಕಲ ದೇವತೆಗಳ ರೂಪವನ್ನು ತಾಯಿಯೊಬ್ಬಳಲ್ಲೇ ಕಾಣುತ್ತಿದ್ದ ಅನಂತನಿಗೆ ಅದೊಂದು ವಜ್ರಾಘಾತವಾಯಿತು.

ರಹೀಮನಿಗೆ ಹೇಳಿದ. ರಹೀಮನೂ ಬಹಳ ವ್ಯಥೆಪಟ್ಟ. ರಜೆಗಾಗಿ ಅರ್ಜಿ

ಬರೆದುಕೊಂಡ. ರಜೆಯೂ ಮಂಜೂರ ಆಯಿತು. ಹನ್ನೊಂದು ತಿಂಗಳ ನಂತರ ತಾಯಿಯಿಲ್ಲದ ತಾಯಿ ಊರಿಗೆ ಹೊರಟನು. ಸಂಗಡ ರಹೀಮನೂ ಅನಂತನ ನಂಬಿಗೆಯ ಶಿಪಾಯಿ ಕರೀಮನೂ ಹೊರಟರು.

## ೧೩

ಎಲ್ಲರೂ ಹಾವೇರೀ ಸ್ಟೇಶನ್ನಿಗೆ ಇಳಿದರು. ಬಸ್ಸಿನಿಂದ ಕೋಲಳ್ಳಿಗೆ ಹೋಗಲು ಸ್ಟ್ಯಾಂಡಿಗೆ ನಡೆದರು. ಅನಂತನು ದೊಡ್ಡ ಹುದ್ದೆಗೆ ಏರಿದ ವಾರ್ತೆ ಎಲ್ಲ ಕಡೆಗೂ ಹಬ್ಬಿತ್ತು. ಎಲ್ಲರೂ ಅನಂತನಿಗೆ ಅಭಿನಂದನೆ ನೀಡುತ್ತಿದ್ದರು. ಅವರಿಗೆಲ್ಲ ಅನಂತ ನಗುತ್ತ ಕೈಮುಗಿಯುತ್ತಿದ್ದ. ಅಷ್ಟರಲ್ಲಿ ಅಲ್ಲಿಯೇ ಸ್ಟ್ಯಾಂಡಿನ ಮಗ್ಗುಲದಲ್ಲಿ ಅಳುವ ಧನಿ ಕೇಳಿಸಿತು. ನಿಂತವರನ್ನೊಬ್ಬ ಅನಂತ "ಏನದು?" ಎಂದು ಕೇಳಿದ. "ಏನೋ ಯಪ್ಪಾ ಭಗವಂತನಾಟ ಒಬ್ಬನ ಮಗಾರೀ ಕಲ್ಯಾಕ ಹೋಗಿದ್ದ. ಮನೀ ಬಿದ್ದು ತಂದಿ-ತಾಯಿ-ತಂಗೀ ಯಲ್ಲಾರೂ ಸತ್ತರೀ ಅದಕಃ ಈಗ ಬಂದಕ್ಯಾಸ ಅಳಾಕ ಹತ್ಯಾನರಿ. ಯಪ್ಪಾ ಯಾರ ನಸೀಬದಾಗ ಏನು ಬರದೈತ್ಯೋ ಯಾರಿಗೊತ್ತು" ಎಂದ. ಆಗ ಅನಂತ ಆ ಹುಡುಗನ ದುಃಖದ ಮುಂದೆ ತನ್ನ ದುಃಖ ಅಲ್ಪವೆಂದು ಭಾವಿಸಿದ. ಆದರೆ ತಾಯ ಪ್ರೀತಿ ಎಲ್ಲಕ್ಕಿಂತಲೂ ಮಿಗಿಲಲ್ಲವೆ ? ಮೋಟರಿನಿಂದ ಕೋಲಳ್ಳಿಗೆ ಎಲ್ಲರೂ ಹೋದರು. ಆಗಲೇ ರಹೀಮ ಹಾವೇರಿಯನ್ನೆಲ್ಲ ಸುತ್ತಾಡಿದ್ದನು.

ಅದೇ ಕೆಂಮಣ್ಣು, ಅದೇ ಕರೀಕಲ್ಲು, ಅವೇ ಗಿಡ, ಅದೇ ಹಿಂದಿನ ದಾರಿ, ಅದೇ ಮನೆ, ಎಲ್ಲವೂ ಅದೇ ಇದ್ದರೂ ಒಂದು ಮಾತ್ರ ಇಂದಿಲ್ಲ. ಇಂದು ಮಾಯವಾಗಿದ್ದು ಒಂದೇ ಒಂದು. ಒಂದೇ ವಸ್ತು ಎಂಥ ವ್ಯತ್ಯಾಸವನ್ನು ಹುಟ್ಟಿಸಿವೆಯಲ್ಲ! ಹೌದು ಒಂದು ಸಂಖ್ಯೆಯಲ್ಲಿ ಸಾವಿರ ಅಂಕೆ ಕೂಡಿವೆ, ಒಂದು ತತ್ವದಲ್ಲಿ ನಾಲ್ಕಲ್ಲ ಅನಂತ ತತ್ವ ಅಡಗಿದೆ. ಒಂದರಲ್ಲೇ ಜಗ. ಜಗದಿಂದಲೇ ಒಂದು ಜಗವನ್ನೆಲ್ಲ ವಾಪಿಸಿರುವದು. ಒಂದೇ ತತ್ವವಲ್ಲವೆ ?

ವೆಂಕಟರಾಯರು ತುಂಬಿದ ಕಣ್ಣುಗಳಿಂದ ಅನಂತನನ್ನು ನೋಡಿದರು. ಮಾತಾಡಬೇಕೆಂದರೆ ಕಂಠ ನಡುಗಹತ್ತಿತು. ವೃದ್ಧಾಪ್ಯದಲ್ಲಿ ಒದಗಿಬಂದ ದುಃಖ ರಾಯರನ್ನು ಜರ್ಜರಿತರನ್ನಾಗಿ ಮಾಡಿತ್ತು. ಆದರೆ ಅನಂತನ ಬಾಯಿಂದ ಶಬ್ದಗಳೇ ಬರಲಿಲ್ಲ. ಕಣ್ಣುಗಳೆಲ್ಲ ಕೆಂಪಾದವು. ಮುಖವೆಲ್ಲ ಸೋತು ಒಣಗಿತು. ಏನೂ ಅರಿಯದೇ ಸ್ವಸ್ಥವಾಗಿ ಅನಂತ ಕುಳಿತುಬಿಟ್ಟ. ನಡೆಯುವದೆಲ್ಲ ನಡೆಯಲೇ ಬೇಕಲ್ಲವೆ?

ಇಂದು ಅನಂತ ದೊಡ್ಡ ಸಾಹೇಬನಾಗಿದ್ದರಿಂದ ಅನಂತನನ್ನು ಮಾತಾಡಿಸಲು ಜನರು ತಂಡತಂಡವಾಗಿ ಬರಹತ್ತಿದರು. "ಅಲ್ಲಾ ಯಂಥಾಕಿ ನಮ್ಮವ್ವ ಕಮಲಾಬಾಯಿ ಮುತ್ತೈದಿತನದಿಂಪ ಸತ್ತ ಸ್ವರ್ಗಾ ಕಂಡಳು" ಎಂದು ಹೆಣ್ಣು ಮಕ್ಕಳು ಆಡುವ ಮಾತು ಅನಂತನ ಕಿವಿಗಳಲ್ಲಿ ಹೊಕ್ಕಾಗ ಅವನಲ್ಲಿ ಯಾವದೋ ಅವ್ಯಕ್ತ ಆನಂದ ಮೂಡಿತು.

ದಿನ ಕರ್ಮಗಳೆಲ್ಲ ವಿಧಿಪೂರ್ವಕ ನೆರವೇರಿದವು. ರಜೆಯ ದಿನಗಳು ಸ್ವಲ್ಪ ಉಳಿದಿದ್ದವು. ಎರಡೇ ದಿನಗಳಲ್ಲಿ ಧಾರವಾಡಕ್ಕೂ ಅನಂತ ಹೋಗಿ ಬಂದ.

ಸರೋಜ ಮತ್ತು ಪ್ರೊಫೆಸರರ ಸಂಗಡ ಜರುಗಿದ ಮಾತುಕಥೆಗಳನ್ನೆಲ್ಲ ವಿಶ್ವನಾಥ ಭಟ್ಟರಿಗೂ ತಂದೆಯವರಿಗೂ ಹೇಳಿದ.

"ಭಟ್ಟರೇ, ನಮ್ಮ ರಹೀಮು, ಬೀದರಿನ ಭಾಗಕ್ಕೆ ಭಯ್ಯಾ ಆಗಿದ್ದಾನೆ. ಎಲ್ಲರೂ ಭಯ್ಯಾ ಅಂತಾರೆ" ಎಂದ. ಅಂದಿನಿಂದ ರಹೀಮ ಕೋಲಕ್ಕಿಗೂ ಭಯ್ಯಾ ಆದನು.

ಮೊದಲೇ ನಿಶ್ಚಯಿಸಿದಂತೆ ಎಲ್ಲರು ವಾಣೀವಿಹಾರಕ್ಕೆ ಹೋದರು. ತಾನೇ ಊರಿದ ಸಸಿ ಇಂದು ಮರವಾಗಿ ನಿಂತಿರುವನ್ನು ನೋಡಿ ಅನಂತ ಆನಂದಗಡಲಿನಲ್ಲಿ ತೇಲಿದ. ಅದರ ಪೂರ್ವಪೀಠಿಕೆ ಹೇಳಿದಾಗ, ಭಯ್ಯಾ ಕರೀಮರೂ ಅನಂತನ ಕೆಲಸಕ್ಕಾಗಿ ತಲೆದೂಗಿದರು.

'ವಾಣೀವಿಹಾರ' ವಾಣಿಯ ಮನೆಯಾಗಿದೆ. ವಾಚನಾಲಯ ನಾಲ್ಕುಪಟ್ಟು ಬೆಳೆದಿದೆ. ಸಾರ್ವಜನಿಕ ಕಾರ್ಯಕ್ಕೆ ಅನುಕೂಲವಾಗುವ ವಿಶಾಲ ಮಂದಿರವೂ ಎದ್ದು ನಿಂತಿದೆ.

ನೆರೆದವರಿಗೆಲ್ಲ ಭಯ್ಯಾನ ಪರಿಚಯು ಅನಂತ ಮಾಡಿಕೊಟ್ಟ. ಹಳೆಯು ಗೆಳೆಯ ರಾಮೂ, ಶೀನೂ ಹಿಗ್ಗಿದರು. ಅಂದು ಜಾತಿವಾದಿ ಎಂದು ಎಲ್ಲರಿಂದ ಹೀಯಾಳಿಸಲ್ಪಟ್ಟಿದ್ದ ರಹೀಮ ಇಂದು ವಿಶ್ವಜನಾಂಗಕ್ಕೆ ಭಯ್ಯಾ ಆಗಿರುವ ನೆಂಪ., ಅವನ ಸಾಹಸ ವಿಜಯಗಳನ್ನೆಲ್ಲ ಕೂಡಿದವರಿಗೆ ಅನಂತ ಹೇಳಿದ. ಎಲ್ಲ ರಿಗೂ ಆನಂದವೂ, ಆಶ್ಚರ್ಯವೂ ಆಯಿತು. ಏಳೆಂಟು ವರುಷಗಳಲ್ಲಿ ನಾಗಾ ಲೋಟದಿಂದ ಗತಿಸಿದ ಸನ್ನಿವೇಶಗಳೆಲ್ಲ ರೂಪತಾಳಿ ಬಂದವು.

ಕರೀಮನು ನವಕರಿಗೆ ಹಾಜರಾಗಲು ಓಡಿದನು.ಅನಂತ ರಜೆಗಾಗಿ ಪುನಃ ರಿಪೋರ್ಟು ಮಾಡಿದನು. ರಜೆಯ ಮಂಜೂರಿಯೂ ಬಂದಿತು. ದಿನಗಳೆ ಯಾಲು, ದುಃಖ ಮರೆಯಲು ದಿನಾಲು ಭಯ್ಯಾನ ಭಜನೆ ಭಾಷಣಗಳು ನಡೆ ದವು. ಕೆಲವೇ ದಿನಗಳಲ್ಲಿ ಬೀದರಿನಲ್ಲಿ ಭಯ್ಯಾ " ಸರ್ವಧರ್ಮ ಸಮ್ಮೇ ಳನ " ನಡೆಸುವನೆಂದು ತಿಳಿದಾಗ ಎಲ್ಲರೂ ಹಿಗ್ಗಿದರು. ಕಾಲಚಕ್ರದಲ್ಲಿ ಜೀವ ನವು ಸಿಕ್ಕು ತಿರುಗುವಾಗ ಯಾವ ರೀತಿ ಮಾರ್ಪಾಟಾಗುವದೆಂಬುದನ್ನು ಕಲ್ಪಿಸುವದು ಕಠಿಣ.

ವಾಣೀವಿಹಾರದ :ವಾರ್ಷಿಕೋತ್ಸವವನ್ನು ಈಗಲೇ ಮಾಡಬೇಕೆಂದು ಭಟ್ಟರು ಅಂದರು. ಕಾರ್ಯಕರ್ತರಾದ ಬಸವಣ್ಣೆಪ್ಪ, ಕನಕಪ್ಪರೂ "ಅವಶ್ಯವಾಗಿ" ಎಂದರು. ಸಿದ್ಧತೆ ಸುರುವಾಯಿತು.

ಒಂದು ದಿನ ಭಯ್ಯಾ ಒಬ್ಬನೇ ಅಲೆದಾಡಲು ಹೋದ. ದಾರಿಯಲ್ಲಿ ಅನಂತನನ್ನು ಟೀಕಿಸುವ ಜನರ ಮಾತುಗಳು ಕಿವಿಗೆ ಬಿದ್ದವು. ಕಳವಳ ಗೊಂಡ. ಹಾಗೇ ಏಳೆಂಟು ಕುಟುಂಬಗಳಿದ್ದ ಮುಸಲ್ಮಾನರ ಓಣಿಗೆ ಹೋಗಿ ಕ್ಷೇಮಸಮಾಚಾರ ವಿಚಾರಿಸಿ ಬಂದ.

ಅನಂತ ಮತ್ತು ಭಟ್ಟರಲ್ಲಿ ಚರ್ಚೆ ನಡೆದಿತ್ತು. ಭಯ್ಯಾನೂ ಭಾಗ ವಹಿಸಿದ. ಭಯ್ಯಾ, ಅನಂತರ ಪ್ರಶ್ನೆಗಳಿಗೆ ಭಟ್ಟರು ಸರಿಯಾಗಿ ಉತ್ತರ ಕೊಡುತ್ತಿದ್ದರು. ಜಾತೀಯ ಭೂತದ ಬಗ್ಗೆ ಭಯ್ಯಾ ಪ್ರಶ್ನೆ ಕೇಳಿದ. " ಎಲ್ಲರ ದೇವನೂ ಒಬ್ಬನೇ, ಅವನನ್ನು ನೋಡುವ, ತಲುಪುವ ಮಾರ್ಗಗಳು ಹಲ ವಾರು. ಎಲ್ಲರಲ್ಲಿಯ ಲಿಂಗ, ಅವ್ಯಕ್ತ, ಅನಿರುದ್ಧ. ಸ್ಥೂಲ ದೇಹಗಳಲ್ಲಿಯ ಅಂಶಗಳು ಆ ಒಬ್ಬನದೇ. ಸರ್ವ ಜಾತಿಗಳಲ್ಲಿಯೂ ಸತ್ವ-ರಜ-ತಮೋಗುಣ ಗಳುಳ್ಳ ಜೀವಿಗಳು ಇರುವವರೇ. ಇಡಾವತ್ಸರ, ಅನುವತ್ಸರ, ಪರಿವತ್ಸರ ಎಲ್ಲ

ಅವ್ಯಕ್ತ ಪರಮಾತ್ಮನೊಬ್ಬನೇ ನಿತ್ಯಾನಿಮಿತ್ತಗಳ ಕಾರಣ. ಸ್ವಾರ್ಥಸಾಧಕ, ಧರ್ಮಗುರುಗಳ ಸೋಗಿನವರ ನೀಚತನವೇ ಜಾತಿಭೂತದ ಮೂಲ"ವೆಂದು ಭಟ್ಟರಂದಾಗ ಭಯ್ಯಾ, ಅನಂತರು ಭಟ್ಟರ ಪಾಂಡಿತ್ಯಕ್ಕೆ ತಲೆದೂಗಿದರು. ಗುಪ್ತರಾಜರು ರಾಜ್ಯಸ್ಥಾಪಿಸಲು ಶಪಥ ತೊಟ್ಟಂತೆ ಅನಂತ, ಭಯ್ಯಾರು "ಜಾತಿ ಐಕ್ಯ" ಸ್ಥಾಪಿಸಲು ಪ್ರತಿಜ್ಞೆ ಮಾಡಿದರು. ಚಾಣಕ್ಯನಂತೆ ಸಹಾಯ ನೀಡಲು ಭಟ್ಟರು ಭರವಸೆ ನೀಡಿದರು.

ಅನಂತ ಒಬ್ಬನೇ ಹಳ್ಳಕ್ಕೆ ಹೊರಟಿದ್ದ. ತನ್ನ ಬಗ್ಗೆಯೂ, ವಾಣೀ ವಿಹಾರದ ಬಗ್ಗೆಯೂ ನಡೆದ ಅಸಹ್ಯ ಮಾತು ಕೇಳಿ ಹೇಸಿದ. ಹಾಗೇ ಹಳ್ಳಕ್ಕೆ ಹೋದ. ಆಗಲೇ ಹೊತ್ತು ಮುಳುಗಿ ಮಬ್ಬುಗತ್ತಲಾಗಿತ್ತು. ಮುಖ ತೊಳೆದು ತಂಬಿಗೆಯಲ್ಲಿ ನೀರು ತುಂಬಿಕೊಂಡು. ಯಾವದೋ ನೆನ ಪಾಗಿ "ಅಪ್ಪಾ" ಎಂದು ಒದರಿದ. ಹೊಟ್ಟೆಯಲ್ಲಿ ಹುದುಗಿದ ದುಃಖ ನೀರು ನೀರಾಗಿ ತಾಯಿಯನ್ನಿಟ್ಟುಕೊಂಡ ಭೂಮಿತಾಯಿಯ ಮೇಲೆ ಹರಿ ಯಿತು. ಮುಗಿಲಲ್ಲಿ ಹಬ್ಬಿದ ಬೆಳದಿಂಗಳು ಅವನನ್ನು ಸಮಾಧಾನಗೊಳಿಸಿ ಮನೆಗೆ ಕಳಿಸಿತು.

ಚೆಂಗುಲಾಬಿ ಇರುವದು ಚುಚ್ಚುವ ಮುಳ್ಳು ಕಂಟಿಯಲ್ಲಿ ಅಲ್ಲವೆ? ಚೆಲುವಿನಲ್ಲಿ ವಿರಸದ ಕಣಗಳೂ ಉಂಟು. ನ್ಯಾಯದ ಸಂಗಡ ಅನ್ಯಾಯವೂ ಇರುವದು ಕಾಲ ನಿಯಮ. ಒಬ್ಬನ ಬೀಳು, ಮತ್ತೊಬ್ಬನ ಏಳು.

ವಾಣೀವಿಹಾರದಲ್ಲಿ ಸಿದ್ಧತೆ ಮುಗಿಯುತ್ತ ಬಂದವು. ವಾಣೀವಿಹಾರದ ದೀಪ ಜಾಜ್ವಲ್ಯಮಾನವಾಗಿ ಬೆಳಗಹತ್ತಿದೆ.

ಅನಂತ, ಭಯ್ಯಾರ ಗೆಳೆತನವನ್ನು ಸಹಿಸದ ಜನರ ಗುಂಪೊಂದು ಇತ್ತು. ಅದರಲ್ಲಿಯೂ ಎಲ್ಲ ಜಾತಿಯವರಿದ್ದರು. ಬಡ ಮುಸಲ್ಮಾನರಿಗೆ ಬೆದರಿಸಿದ್ದರಿಂದ ಅವರು ಅಲ್ಲಿ ಬರುವದಿಲ್ಲೆಂದು ಭಯ್ಯಾಗೆ ತಿಳಿಸಿದರು. ಭಯ್ಯಾನ ಪ್ರಯತ್ನ ನಿಷ್ಫಲವಾಯಿತು. ಅನಂತ ಸಮಾಧಾನಪಡಿಸಿದ. ಮರುದಿನವೇ ಸಮಾರಂಭ.

ಅನಂತ ಮನೆಗೆ ಬಂದ. ಮಲಗಲು ಯತ್ನಿಸಿದ. ಆದರೆ ವಿಚಾರಗಳು ಚುಚ್ಚುತ್ತಿದ್ದವು. "ನನ್ನ ಮೇಲೇಕೆ ಈ ಜನರ ಸಿಟ್ಟು, ವಾಣೀವಿಹಾರದ

ಮೇಲೇಕೆ ಮತ್ಸರ, ಜಾತೀಯ ಜಾಡ್ಯಕ್ಕೆ ಅಂತರಜಾತಿ ವಿವಾಹವೇ ರಾಮ ಬಾಣ. ಆದರೆ ಸರೋಜಳು ಬ್ರಾಹ್ಮಣಳಾಗಿರದಿದ್ದರೆ? ಜಾತೀಯ ಐಕ್ಯ ಸಾಧಿಸುವ ಸಂಘಗಳು ಪ್ರತಿ ಊರಲ್ಲಿಯೂ ಹುಟ್ಟಬೇಕು. ಈ ಕಾರ್ಯ ಕ್ಕಾಗಿ ನವಕರಿಗೆ ಶರಣು ಹೊಡೆದರೆ ಮುಂದೇನು? ಯಾಕೆ ಇದರಲ್ಲಿ ಇದ್ದೇ ಕೆಲಸ ಮಾಡಬಹುದು. ನವಕರಿ ಬಿಟ್ಟರೆ ತಂದೆಗೂ ಸಮಾಜಕ್ಕೂ ಭಾರ. ಹಣವಿಲ್ಲದವನ ಬಾಳುವೆ ಹೆಣಕ್ಕಿಂತಲೂ ಕಡೆ. ಹೌದು ಹಣವಿದ್ದವ ಮಾತ್ರ ಕಾರ್‍ಯಕರ್ತನ ಸೋಗು ಹಾಕಬಲ್ಲನು. ಬಡವ ನಿಷ್ಠಾವಂತ ಕೆಲಸಗಾರನಾದರೂ ಸಮಾಜ ಅವನ ಕೆಲಸಗಳನ್ನೂ ಕೃತಿಗಳನ್ನೂ ಗುರುತಿಸಲಾರದು." ಎಂದು ವಿಚಾರಿಸುತ್ತಲೇ ಮಲಗಿದನು.

ಮುಂಜಾನೆ ಎದ್ದು ಕನ್ನಡಿಯ ಮುಂದೆ ನಿಂತು ಬಾಚಿಕೊಳ್ಳುತ್ತಿದ್ದ. ವಾಣೀವಿಹಾರದ ಹುಟ್ಟುದಿನ. ಧಾರವಾಡದಿಂದ ಅನಂತನ ಪ್ರೊಫೆಸರರು ಬರುವರು. ಹಠಾತ್ತಾಗಿ ಕನ್ನಡಿಯಲ್ಲಿ ಸರೋಜಳ ಮುಖ ಕಂಡಿತು. ತಿರುಗಿ ನೋಡಿದ. ಸರೋಜಳ ರೂಪ ನಿಂತಿತ್ತು. "ಹೇಗೆ ಬಂದೆ?" ಎಂದ ಅನಂತ. "ಭಟ್ಟರ ಓಲೆಯಿಂದ" ಸರೋಜ ನುಡಿದಳು. ಅನಂತ ನಕ್ಕ. ಸರೋಜಳೂ ಪಾಲು ಕೂಡಿಸಿದಳು. ಹೊರಗಡೆ ಬರುವಷ್ಟರಲ್ಲಿ ಪ್ರೊಫೆಸರರೂ ಹಾಜರಾಗಿದ್ದರು. ದೇಹ ನೇರವಾಗಿ ಪ್ರೊಫೆಸರರಿಗೆ ಮಣಿಯಿತು.

ಅನಂತ ತಾನೇ ಮಾಡಿದ ಚಹ ಪ್ರೊಫೆಸರ ಮತ್ತು ಸರೋಜರಿಗೆ ಕೊಟ್ಟನು. ಸರೋಜಳಿಗೆ ಅದು ಅಮೃತವಾಗಿ ಹತ್ತಿತು. ಮುಂದಿನ ಸಿದ್ಧತೆಗೆ ಅನಂತ ವಾಣೀವಿಹಾರಕ್ಕೆ ಹೋದ. ಅಧ್ಯಾಪಕರು ವೆಂಕಟರಾಯರ ಸಂಗಡ ಮಾತಿ ನಲ್ಲಿ ತೊಡಗಿದರು. "ಇವಳೇ" ಎಂದರು ಪ್ರೊಫೆಸರರು. ರಾಯರು ಸಂತೋಷ ತುಂಬಿದ ನಗೆ ಬೀರಿದರು.

ಸರಿಯಾಗಿ ಐಯ್ದೂವರೆಗೆ ಕಾರ್‍ಯಕ್ರಮ ಆರಂಭವಾಯಿತು. ಪ್ರೊಫೆಸರರು ತಮ್ಮ ಸ್ನೇಹಿತ ವೀರಶೈವ ಸನ್ಯಾಸಿಯೊಬ್ಬರಿಗೆ ಆಮಂತ್ರಣ ಕೊಟ್ಟಿದ್ದರಿಂದ ಅವರೂ ಬಂದಿದ್ದರು. ಸುತ್ತಲಿನ ಹಳ್ಳಿಯ ಜನ ವಿಶೇಷವಾಗಿತ್ತು. ಅಧ್ಯಕ್ಷರು ಸ್ವಾಮೀಜಿಯವರೇ ಆದರು.

ವಿಶ್ವನಾಥಭಟ್ಟರ ಪ್ರಾಸ್ತಾವಿಕ ಭಾಷಣ ಮುಗಿದ ನಂತರ ಭಯ್ಯಾನ ಭಾಷಣ ಸುರುವಾಯಿತು. ಮಾತಿನ ಮಳೆಯಲ್ಲಿ ಕುರಾನಿನ ವಾಕ್ಯಗಳು ಆಣೆ

ಕಲ್ಲಿನಂತೆ ಬೀಳಹತ್ತಿದವು. ಅವನ ಭಾಷಣದ ಓತಪ್ರೋತತೆ ಅವರ್ಣನೀಯ ವಿತ್ತು. "ಇಸ್ಲಾಂ" ಅಂದರೆ ಶಾಂತಿ ಎಂದು ಹೇಳಿ ಸರ್ವಧರ್ಮದ ಸಮನ್ವಯತೆಯನ್ನು ತಿಳಿಸಿ ವಾಣೀವಿಹಾರ ಈ ದಿಶೆಯಲ್ಲಿ ದಾರಿಗಂಬವಾಗಲೆಂದು ಹೇಳಿ ಮಾತು ಮುಗಿಸಿದ. ಹಳ್ಳಿಯ ಜನವೆಲ್ಲ "ಹೌದ ಹೌದು" ಎಂದರು. ನಂತರ ಸ್ವಾಮೀಜಿಯವರ ಸಿಂಹನಾದ ಕೇಳಹತ್ತಿತು. ಅವರ ಪ್ರತಿಯೊಂದು ಶಬ್ದಗಳು ತರ್ಕದ ತಕ್ಕಡಿಯಲ್ಲಿ ತೂಗಿ, ಅನುಭವದ ಅಗ್ನಿಯಲ್ಲಿ ಬೆಂದು, ಭಾವದ ಬೆಡಗಿನೊಂದಿಗೆ ಬರುತ್ತಿದ್ದವು. ವೀರಶೈವ ಧರ್ಮದಲ್ಲಿಯ ಏಕೈಕತೆಯ ಅಂಶಗಳನ್ನು ತಿಳಿತಿಳಿಯಾಗಿ ತೇಲಿಸಲು ನೆರೆದ ಜನ ಸ್ವಾಮೀಜಿಯವರನ್ನು ಮನದಲ್ಲಿಯೇ ವಂದಿಸಿತು. ನನ್ನ ಧರ್ಮ ನನಗೆ ಶ್ರೇಷ್ಠ. ಸರ್ವರಿಗೂ ನನ್ನ ಧರ್ಮ ಶ್ರೇಷ್ಠವಾಗಲಿಕ್ಕಿಲ್ಲ. ಧರ್ಮವೆಂದರೆ ಕೆಲಸ, ಕರ್ತವ್ಯ. ಎಲ್ಲ ಧರ್ಮಗಳೂ ಒಂದೇ. ಸಮತೆ, ಸಹೋದರತೆ ಧರ್ಮದ ಬೇರುಗಳು. ಸಹನೆ, ಶಾಂತತೆ ಜಾತಿಯ ತಳಗಲ್ಲು. ವೀರಶೈವ ಧರ್ಮದಲ್ಲಿ ಎಲ್ಲರಿಗೂ ಪ್ರವೇಶವಿದೆ. ಮನ ಹಿರಿದಾಗಿದ್ದವ ಮಾತ್ರ ಹಿರಿಯ. ಕೆಂಪು ಬಣ್ಣದ ಅರಿವೆ ಧರಿಸಿದ ಮಾತ್ರಕ್ಕೆ ಸನ್ಯಾಸಿಯಲ್ಲ. ಆಶೆ ತ್ಯಜಿಸಿದವ ಸನ್ಯಾಸಿ, ಸ್ವಾಮಿ" ಎಂದಾಗ ಪ್ರೊಫೆಸರರು "ಹಿಯರ್ ಹಿಯರ್" ಅಂದರು. ಕೂಡಿದ ಜನ ಮನಸೋತು ಮೂಕರಾದರು. ನಂತರ ಪ್ರೊಫೆಸರರು ಈ ಕಾರ್ಯಕ್ಕಾಗಿ ಹೊಸ ಕಟ್ಟಡದ ಅವಶ್ಯವಿದೆಯೆಂದೂ ಅದಕ್ಕಾಗಿ ತಾವು ಐದು ನೂರು ರೂಪಾಯಿ ಕೊಡುವದಾಗಿಯೂ ಸಾರಿದರು. ತಮ್ಮ ಜೋಳಿಗೆಯ ಸಹಾಯದಿಂದ ಸಾವಿರ ರೂಪಾಯಿ ಕೂಡಿಸಿ ಕೊಡಲು ಸ್ವಾಮೀಜಿಯವರು ಅಭಯ ನೀಡಿದರು. ಭಯ್ಯಾ, ಭಟ್ಟರ ವಾಗ್ದಾನಗಳೂ ಆದವು. ಜೋಳಿಗೆ ಹಿಡಿದುಕೊಂಡು ನಿಂತ ಸ್ವಾಮೀಜಿಯವರ ಜೋಳಿಗೆ ವಸ್ತು ಆಭರಣಗಳಿಂದ ತುಂಬಿತು. ಅದರ ಸಂಗಡ ಕೋಲಳ್ಳಿಯ ಭಾಗ್ಯವೂ ತುಂಬಿ ಬಂತು.

ರಾತ್ರಿ ಹತ್ತು ಘಂಟೆಯ ನಂತರ ಸಂಗೀತ ಕಚೇರಿ. ಎಲ್ಲರೂ ಮನೆಗೆ ಹೋದರು. ಭಯ್ಯಾಗೆ ಬೇರೆ ಕಡೆ ಆಮಂತ್ರಣವಿದ್ದದ್ದರಿಂದ ಅಲ್ಲಿಯೇ ನಿಂತ. ಉಳಿದ ಪರಿವಾರ ಸಹಿತ ಅನಂತ ತನ್ನ ಮನೆಗೆ ಹೋದ. "ಭಯ್ಯಾ, ನಮ್ಮೂರ ಹುಡುಗಾ, ಎಲ್ಯೋ ನಿಮ್ಮ ಕಡೆ ಪೋಲೀಸ ಆಗ್ಯಾನಂತ ಗೊತ್ತೈತೇನಪಾ" ಎಂದ ಒಬ್ಬ ಮುದಕ. "ಅವನ ಹೆಸರೇನ್ರಿ? ಯಾ ಊರಾಗ ಇದ್ದಾನ್ರಿ?"

ಎಂದ ಭಯ್ಯಾ. "ಯಾ ಊರೋ ಏನೋ ಗೊತ್ತಿಲ್ಲಪಾ ಮೊನ್ನೆ ಅವನ ಪೈಕೀವರು ಭೆಟ್ಟಿ ಆಗಿದ್ರು, ಹೇಳಿದ್ರು. ಅದಕ್ಕs ಕೇಳಿದೆ. ಮ....ಮ....ಅಂತ ಏನೋ ಇತ್ತಪಾ"

"ಏನು ಮಹದೇವ ಏನ್ರೀ?"

"ಹೂಂ, ಮಹದೇವ ಇದ್ದಾಂಗ ಇದ್ನಪಾ. ಆಂ, ನೆನಪಾತು. ನಮ್ಮ ಮಲ್ಯಾ ಅಲ್ಲೀನೊ ಬಸವಂತ. ಹೌದು ಹೌದು ಮಲ್ಲಪ್ಪ ಅಂತಿದ್ರ ಇಲ್ಲೆ ಮತ್ತs ಅಲ್ಲೆ ಏನಂತಾರೋ ಏನೋ."

"ನನಗ ಗೊತ್ತಿಲ್ಲರಿ, ಪತ್ತೆ ಆದ್ರ ತಿಳಿಸತೀನ್ರಿ" ಎಂದ. ಹಾಗೇ ಬಸವಂತನ ಮನೆಗೆ ಊಟಕ್ಕೆ ಹೋದ.

ಸರಿಯಾಗಿ ರಾತ್ರಿ ಹನ್ನೊಂದಕ್ಕೆ ಸಂಗೀತ ಆರಂಭವಾಯಿತು. ಶಾಂತಿ ಯುಕ್ತ ಪ್ರಸನ್ನತೆ ಎಲ್ಲೆಡೆ ವ್ಯಾಪಿಸಿತ್ತು. ಭಯ್ಯಾ 'ಶುದ್ಧ ಕಲ್ಯಾಣ'ದಲ್ಲಿ ಗಾನ ಎತ್ತಿದ. ಆಲಾಪನ, ಗಿರಡಿಗಳಿಂದೊಡಗೂಡಿದ ಸಂಗೀತ ಸಭಿಕರನ್ನೆಲ್ಲ ರಾಗಸಮುದ್ರದಲ್ಲಿ ತೇಲಿಸಿತು. ಸಂಗೀತಪ್ರಿಯ ಸ್ವಾಮೀಜಿಯವರಿಗೆ ಸಾಕಾಗ ಲಿಲ್ಲ. "ಭಯ್ಯಾ, ಇನ್ನೊಂದಾಗಲಿ" ಎಂದರು. ಭಯ್ಯಾ "ಜಯಜಯವಂತಿ" ಯಲ್ಲಿ ಹಾಡಿದನು. ತೇಲುವ ರಾಗ ರಂಗಕ್ಕೆ ಅಧಿಕ ಕಳೆ ಕೊಡಲು ಭಯ್ಯಾನ ಗೆಳೆಯ ರಾಮು ತಬಲಾವನ್ನು ಸರಿಯಾದ ಸಂ, ಹುಸಿ, ಪೆಟ್ಟುಗಳಿಂದ ಓಗೊಡಿಸುತ್ತಿದ್ದ. ತಬಲಾ ವಿದ್ಯೆಯಲ್ಲಿಯ ರಾಮೂನ ನೈಪುಣ್ಯತೆ, ದೀಪ ಚಂದಿ, ಜಲ್ದ ಎಕ್ತಾ, ಪಂಜಾಬಿ, ತ್ರಿವಟಿಗಳ ಮೂರು ಕಾಲಗಳಲ್ಲಿ ನುಡಿಸುವ ನಯತನ, ಜನರನ್ನೆಲ್ಲ ಮೂಕ ಮಾಡಿತು. ತಬಲಾ ರಾಮೂನಿಗೆ ಕರತಲಾ ಮಲಕ. ಕರೇ ನಾಲ್ಕರ ತಬಲಾ ನುಡಿಯುವಾಗ ಸುರದುಂದುಭಿಯ ಮಂದ್ರ ನಾದವು ಇದಕ್ಕಿಂತಲೂ ಕಡಿಮೆ ಎಂಬ ಭಾಸವಾಗುತ್ತಿತ್ತು ಜನದಲ್ಲಿ. ಹಣ್ಣಾದ ರಾಮೂನ ಕೈ ತಬಲಾದಲ್ಲಿ ರಾಮೂನದೇ. ಇದಲ್ಲದೇ ಕೋಲಳ್ಳಿಯ ಕರೀಮಾ "ಕವಾಲಿ" ಅಂದನು. ಕೆಳಓಣಿ ಮ್ಯಾಳ "ಗೀ ಗೀ ಪದ" ಹೇಳಿತು. ಗೌಡರ ಗ್ಯಾಂಗು ಯಕ್ಷಗಾಯನ ಮಾಡಿ ತೋರಿಸಿತು. ಹೊತ್ತಾಗಿದ್ದರಿಂದ ಕಾರ್ಯಕ್ರಮ ಕೊನೆಗಂಡಿತು. "ಎಲೆ, ಬೇಸಿ ಬಿಡೋ ನಮ್ಮ ಕೆಳಗಿನ ಓಣೀ ಗೀ ಗೀ ಪದಾನ ಇಷ್ಟರಾಗ ರಂಗ ಆಗಿದ್ದು" ಎನ್ನುತ್ತ ಹಳ್ಳಿಯ ಜನ ಮನೆ ಹಾದಿ ಹಿಡಿದರು.

ರಾತ್ರಿ ಮೂರೂವರೆ ಆಗಿರಬಹುದು. ಒಮ್ಮೆಲೇ "ಯಪ್ಪಾ ಅಯ್ಯೋ" ಎಂಬ ಕೂಗು ಹಳ್ಳಿಯನ್ನೆಲ್ಲ ವ್ಯಾಪಿಸಿತು. ಎಲ್ಲರೂ ಗಡಿಬಿಡಿಯಿಂದ ಅತ್ತಿತ್ತ ಓಡಹತ್ತಿದರು. ವಾಣೀವಿಹಾರದ ಮೇಲೆ ಬೆಂಕಿಯ ಕಿಡಿಗಳು ಹಾರಹತ್ತಿದವು. ಕಟ್ಟಿದ್ದ ಹಂದರ, ಹಾಕಿದ್ದ ಮಂಟಪ, ಕೊಂಡಿಟ್ಟ ಪುಸ್ತಕ ಎಲ್ಲವುಗಳೂ ಅಗ್ನಿನಾರಾಯಣನ ಒಡಲು ಸೇರಿದವು. ಅನಂತ, ಭಯ್ಯಾರ ಕಣ್ಣುಗಳಲ್ಲಿ ನೀರು ಇಳಿದವು. ನಿಂತ ಜನ ನೀರು ತಂದು ಆರಿಸಿದರು. ಆದರೆ ಮುಗಿದುಹೋಗಿತ್ತು ಆಗಲೇ ಅದರ ಜೀವನ. "ಯಪ್ಪಾ, ಗೊತ್ತಿತ್ತೋ ನಮಗ ಇದು" ಎಂದರು ಕೂಡಿದ ಹಳ್ಳಿಯ ಜನ. "ಇಷ್ಟೇ ಹೌದಲ್ಲೋ ಅವರು ಮಾಡೋದು" "ಯಾವನಲೇ ಅವಾ ಮಾಡಾವಾ" "ದೇವರು ಬ್ಯಾರೆ ಹಾಂಗಃ ಕುಂತಿಲ್ಲ, ಆತಗ ಗೊತ್ತ ಆಯತಿ ಎಲ್ಲಾ. ಇದಃ ಕಣ್ಣಿಲೇ ನೋಡೂಣಂತ" ಎಂಬ ವಿವಿಧ ವಿಚಾರಗಳು ಜನರ ಬಾಯಿಂದ ಬರಹತ್ತಿದವು. "ಇಲ್ಲಿ ದಹನವಾದದ್ದು ನಿಮ್ಮ ವಾಣೀವಿಹಾರವಲ್ಲ, ನಿಮ್ಮ ಶಕ್ತಿ ಅಲ್ಲ, ನಿಮ್ಮ ದುಡ್ಡು ಅಲ್ಲ, ಆದರೆ ಭಸ್ಮವಾದದ್ದು ನಿಮ್ಮೂರ ನೀಚತನ, ಸ್ವಾರ್ಥತನ, ಜಾತೀಯತೆ. ನಿಮ್ಮ ಶಕ್ತಿ ಅನಂತ, ಶ್ರದ್ಧೆ ಅಚಲ, ಪ್ರೀತಿ ಅಮರ. ನಾಳಿನ ದಿನವೇ ನಾನು ಹೊಸ ಕಟ್ಟಡಕ್ಕೆ ಪ್ರೀತಿ, ಪ್ರೇಮ, ವಿಶ್ವಾಸಗಳ ತಳಹದಿಯ ಮೇಲೆ ನಿಲ್ಲುವ ಅಡಿಗಲ್ಲು ಹಾಕುವೆ"ನೆಂದರು ಸ್ವಾಮೀಜಿಯವರು. ಆದರೂ ಜನರಲ್ಲಿ ಹಗೆ ತೀರಿಸಬೇಕೆಂಬ ಹಠ ಹಾಗೇ ಉಳಿಯಿತು.

ಮುಂಜಾನೆ ಏಳುವಾಗಲೇ ಅನಂತನ ಮನೆಯ ಮುಂದೆ ಪೋಲೀಸನೊಬ್ಬ ನಿಂತಿದ್ದ. "ಯಾಕೆ?" ಎಂದ ಅನಂತ. "ನಿಮ್ಮಲ್ಲೆ ಭಯ್ಯಾ ಅಂತ ಯಾರೋ ಬಂದಾರಂತ್ರೀ, ಅವರ ಮ್ಯಾಲೆ ಕೇಸ ಅವ ಅಂತ. ಸಾಹೇಬರು ಹಾವೇರಿಗೆ ಬಾ ಅಂದಾರ್ರಿ" ಅಂದ. ಅನಂತನಿಗೆ ಊರ ಜನರ ಮೋಸ ಹೊಳೆಯಿತು. "ಏ ಅನಂತಾ, ತಗಿ ನನಗ ಗೊತ್ತಾತು, ಯಾ ಲುಚ್ಚ್ಯಾರು ಇದರಾಗ ಇದ್ದಾರಂತ. ಮತ್ತ ಇವತ್ತ ಯಾರೋ ಹೇಳತಿದ್ರು. ನಮ್ಮ ಸ್ವಾಮಿ ಬಂದಾರಲ್ಲ ಆವರ್ನ ಬಹಿಷ್ಕಾರ ಹಾಕತಾರಂತ, ಲಿಂಗಾಯತ ಧರ್ಮದಿಂದ ಹೊರಗ ಇಡತಾರಂತ. ಹೌದು, ಇದರಾಗ ನಮ್ಮ ಹಾರವರದೂ ಅಂಗ ಅದ. ಇರಲಿ ನೋಡತೀನಿ ಒಂದು ಕೈ. ಅನಂತಾ, ನೀ ಇವರ್ನೆಲ್ಲಾ ಊರಿಗೆ ಕಳಿಸು. ನಾನು ಹಾವೇರಿಗೆ ಹೋಗಿ ಫೌಜದಾರ್ನ ಭೆಟ್ಟಿಯಾಗಿ ಬರ

ತೀನಿ" ಎಂದು ಭಟ್ಟರು ಹೊರಟೇಬಿಟ್ಟರು.

ಪ್ರೊಫೆಸರ ಮತ್ತು ಸರೋಜರ ಸಂಗಡ ಅನಂತನು ತುಂಬ ಮಾತನಾಡಿ ಆಮೇಲೆ ಧಾರವಾಡದ ಬಳಗಕ್ಕೆ ಬೀಳ್ಕೊಟ್ಟನು.

"ಅನಂತಾ, ನಾ ಹೇಳಿಧಾಂಗs ಆಗಿತ್ತು. ಯಾರೋ ಇಲ್ಲಿಂದಲೇ ಭಯಸ್ಯಾನ ಪ್ಯಾಲಿ ಮೂಕೀ ಅರ್ಜಿ ಮಾಡಿದ್ದರಂತೆ, ನಾ ಎಲ್ಲಾ ಮುಗಿಸೀನಿ. ಇಷ್ಟೇ ಅಲ್ಲ, ಮುಂದ ನೋಡೂವಂತಿ ಮೋಜ್ಯಾ. ವಾಣೀವಿಹಾರದ ದುಮ್ಮ ಜಲು ಆಯಿತು ಅಂತ ತಿಳಿ" ಎಂದು ಭಟ್ಟರು ಆನಂದದ ಉಬ್ಬಿನಲ್ಲಿ ನಕ್ಕರು. "ಭಟ್ಟರ, ಮತ್ತ ಅಪ್ಪನ್ನ ಕರಕೊಂಡು ಹೋಗತೀನಿ. ನಾಳೀ ಹೋಗಬೇಕು" ಎಂದ ಅನಂತ. "ಅನಂತಾ, ನಾ ಇಲ್ಲೆ ಇರೋತನಕಾ ರಾಯರೂ ಇಲ್ಲೆ ಇರೋವರ, ನಮ್ಮೂರಿಗೆ ನಿಮ್ಮ ಮನಿ ಎರವು ಮಾಡಬ್ಯಾಡಪಾ. ಇನ್ನೂ ಲೇವಾದೇವಿ, ಹೊಲಾಮನೀ ಕೆಲಸ ಅವ, ಅವರು ಇಲ್ಲೇ ಇರ್ಲಿ" ಅಂದರು. ಅನಂತ 'ಹೂಂ' ಎಂದ.

ಮರುದಿನ ಆನಂತನೊಬ್ಬನೇ ಬೀದರಿಗೆ ಹೊರಟ. ಕೂಡಿದ ಜನರ ಕಡೆಗೆ ನೋಡಿ "ಮುಪ್ಪಿನ ತಂದೆ ನಿಮ್ಮ ಕೈಯಲ್ಲಿ" ಎಂದನು ಅನಂತ. ರಾಯರು "ಹೋಗಿ ಬಾಪ್ಪ, ಪತ್ರ ಮಾತ್ರ ಬರಕೋತ ಇರು" ಅಂದರು. ಗಾಡಿ ಓಡಿತು. ಜನ ತಿರುಗಿತು.

## ೧೪

ಕಚೇರಿಯ ಕಾಗದಪತ್ರಗಳು ರಾಶಿಯಾಗಿ ಬಿದ್ದಿದ್ದವು. ಹೊಸ ಸಾಹೇಬರ ದರ್ಬಾರ ಜೋರಿನಿಂದ ನಡೆದಿತ್ತು. ವಾತಾವರಣ ಸ್ವಲ್ಪ ಬದಲೂ ಆಗಿತ್ತು. ಬತ್ತಿದ ಜಾತೀಯ ವಾದದ ಬೀಜಗಳು ಅಂಕುರಿಸಹತ್ತಿದವು.

ಕೆಲಸದ ಹೊಣೆ ಹೆಚ್ಚಿದ್ದರಿಂದ ಆನಂತನಲ್ಲಿ ವ್ಯಸನ ವೇದನೆಗಳು ಮರೆಯಾದವು. ಜಿಲ್ಹೆಯ ಹಳ್ಳಿ ಹಳ್ಳಿಗೂ ಭೆಟ್ಟಿಕೊಟ್ಟು ಐಕ್ಯದಿಂದಿರಲು ಹೇಳಿ ಬರಹತ್ತಿದ. ಜನರು ಆನಂತನನ್ನು ಅಧಿಕಾರಿಯಂತೆ ನೋಡದೆ ಒಬ್ಬ ಸತ್ಪುರುಷ

ನಂತೆ ನೋಡಹತ್ತಿದರು. ಕೈಕೆಳಗಿನವರ ಮೇಲೆ ಕಣ್ಣಿಟ್ಟ. ಅನಂತನ ಅಹೋರಾತ್ರಿ ದುಡಿತ ಅಲ್ಲಲ್ಲಿ ' ಶಾಂತಿಸಂಘ ' ಸ್ಥಾಪಿಸಿತು.

ಒಂದು ದಿನ ಸಂಶಯದಿಂದ ಒಬ್ಬನ ಮನೆ ಶೋಧಿಸಿದ. ಮದ್ದುಗುಂಡುಗಳ ರಾಶಿ ಸಿಕ್ಕಿತು. ಮುಂದಿನ ವಿಚಾರಕ್ಕೆ ಮೇಲೆ ಬರೆದ. ಆದರೆ ಮನೆ ಮಾಲಕ ಅನಂತ ಮತ್ತು ಭಯ್ಯಾರ ಗೆಳೆಯ ಅಬ್ದುಲ್ಲ. ಅಬ್ದುಲ್ಲ ಅಂಗಲಾಚಿ ಬೇಡಿಕೊಂಡ. ಹಣದ ವಾಸನೆ ಬಡಿಸಿದ. ಅನಂತ ಮಾತ್ರ " ಎಚ್ಚರಿಕೆ, ಗೆಳೆತನ ತಿಂದುಣ್ಣುವದಕ್ಕೆ ಮಾತ್ರ. ಇದಕ್ಕಲ್ಲ " ಎಂದ. ಕೇಸು ಹೈದ್ರಾಬಾದಿಗೆ ಹೋಯಿತು. ಮುಂದೆ ರಜಾಕಾರ ಸದಸ್ಯತ್ವದ ಪ್ರಮಾಣಪತ್ರದ ಮೇಲೆ ಅವನನ್ನು ಬಿಡುಗಡೆ ಮಾಡಿತು. ಬೆಳೆಯುವ ಅನಂತನ ವಿರೋಧಿಗಳಲ್ಲಿ ಅಬ್ದುಲ್ಲನೂ ಒಬ್ಬನಾದ.

ಹೊಸ ಸಾಹೇಬರು ಅನಂತನ ಬಗ್ಗೆ ಏನೇನೋ ಕಲ್ಪಿಸಹತ್ತಿದರು. ಅವನ ಸಹಾಯದಿಂದ ಅಲ್ಲಲ್ಲಿ ತಲೆಯೆತ್ತಿದ ಶಾಂತಿಸಂಘಗಳು ಸಾಹೇಬರ ದೃಷ್ಟಿಯಲ್ಲಿ ಬೇಕಾಯದೆಶೀರ್ ಅನಿಸಹತ್ತಿದವು. ಭಯ್ಯಾನ ಚಲನವಲನಗಳನ್ನು ಹಚ್ಚಲು ಸಿ. ಆಯ್. ಡಿ. ಯೊಬ್ಬನನ್ನು ನಿಯಮಿಸಿದರು. ಈ ವಿಷಗಾಳಿ ಅನಂತನಿಗೂ ತಾಕಿತು.

ಅನಂತ ಮಾತ್ರ ರೂಢಿಯಂತೆ ಕಚೇರಿ ಕೆಲಸವಲ್ಲದೆ ಜಾತೀಯ ಭೂತ ಓಡಿಸುವ ಮಾಟಗಾರನ ಕಾಯಕವನ್ನೂ ನಡಿಸಿಯೇ ಇದ್ದ. ಭಯ್ಯಾನಿಗೆ ಕಿವಿಮಾತು ಹೇಳಿ ಪ್ರಚಾರಕ್ಕೆ ಕಳಿಸಿದ. ಕೆಲವು ವಿಶಿಷ್ಟ ಹಿಂದೂ-ಮುಸಲ್ಮಾನರು ಅನಂತನನ್ನು ಹಾಡಿ ಹರಿಸಹತ್ತಿದರು. ಅನಂತನ ಆಳಿಕೆಯಲ್ಲಿ ಕೊಲೆ-ಸುಲಿಗೆಗಳು ಕಡಿಮೆಯಾದವು. ಆದರೆ ಮೇಲಿನ ಅಧಿಕಾರ ಕೊಟ್ಟು ಅನಂತನನ್ನು ಬೀದರಿನಲ್ಲಿಯೇ ಇಟ್ಟಿದ್ದರಿಂದ ಇನ್ನುಳಿದ ಹಲವರಿಗೆ ಹೊಟ್ಟೆ ಶೂಲಿ ಎದ್ದಿತು.

ಹೈದ್ರಾಬಾದಿನಲ್ಲಿ ಯಾವುದೋ ಖಾಸಗೀ ಸಭೆಯಿದ್ದುದರಿಂದ ಸಾಹೇಬರು ಹೋದರು. ಅನಂತನಿಗೆ ಚಾರ್ಜು ಕೊಟ್ಟರು. ಅನಂತ ಮಾತ್ರ ಮೊದಲಿನಕಿಂತಲೂ ಲಕ್ಷ್ಯಪೂರ್ವಕ ಕೆಲಸ ನಡೆಸಿದನು. ಅನಂತನ ವಿರೋಧಿಗಳ ಬಳಗ ದೊಡ್ಡದಿದ್ದರೂ ಅನಂತನ ಹೆಸರು ಬಡವ, ದೀನರ ಮನೆಯ ಮಾತಾಯಿತು.

ಒಂದು ಮಧ್ಯಾಹ್ನ ಕೋಲಕ್ಕಿಗೂ ಧಾರವಾಡಕ್ಕೂ ಓಲೆ ಬರೆದು ಮುಗಿಸಿ, ಬೇಜಾರವಾದುದರಿಂದ 'ಜೀವನ' ಎಂಬ ಕಾದಂಬರಿ ಓದುತ್ತ ಹಾಸಿಗೆಯ ಮೇಲೆ ಒರಗಿದ್ದ. ಕಾದಂಬರಿಯಲ್ಲಿ ಅಧಿಕಾರಿಗಳ ಬಗ್ಗೆ ಏನೋ ಬಂದದ್ದರಿಂದ ಒಮ್ಮೆಲೇ ಕಚೇರಿಗೆ ಓಡಿದ.

"ಇದರ್ ಆವ್" ಎಂದ ಅನಂತ. "ಜೀ ಸಾಬ" ಎಂದ ಪೋಲೀಸ ಜಮಾದಾರ. "ಜಮಾದಾರ, ಪಹರೇದ ಮ್ಯಾಲೆ ಯಾರ ಇದ್ದಾರ?"

"ನಿನ್ನೆ ರಾತ್ರಿ ಕಲಬುರ್ಗಿಯಿಂದ ಬಂದ ಹೊಸ ಸಿಪಾಯಿ" ಸಾಬ.

"ಕಿತನಾ ವಕ್ತ ಹೋಗಯಾ."

"ಸಬೇರೆ ದಸ್ ಬಜೆಸೆ ಕರ್‌ರಹಾ ಹೈ ಸಾಬ."

ಮುಂಜಾನೆ ಹತ್ತರಿಂದ ಮಧ್ಯಾಹ್ನ ಮೂರರ ವರೆಗೆ ಏಕಪ್ರಕಾರ ಪಹರೆ ಮಾಡುತ್ತಿದ್ದ ಶಿಪಾಯಿಯ ಬಗ್ಗೆ ಅನಂತನಲ್ಲಿ ಅಭಿಮಾನ ಹುಟ್ಟಿತು. "ಯಾವ ಜಾತಿಯವ ಇದ್ದರೇನು? ಮುಸಲ್ಮಾನರಲ್ಲಿಯೂ ಎಂಥವನಿರುವ ನಲ್ಲ? ಅದೂ ಈ ಕಾಲದಲ್ಲಿ" ಎಂದು ತನಗೆ ತಾನೇ ಅಂದುಕೊಂಡು "ಐಸಾ ಕಾಮ ಕರನಾ" ಎಂದನು. "ಇಷ್ಟು ದುಡಿಯುವದು ಹಣಕ್ಕಾಗಿ. ಹಣ ಮತ್ತು ಅಧಿಕಾರವಿದ್ದರೆ ಮಾನವ ಬರಿ ಶೂನ್ಯ. ಈ ಜಗದಲ್ಲಿ ಕರ್ತ ವ್ಯಕ್ಕೆ ಬೆಲೆ ಇಲ್ಲ. ನಾನೇ ಅಪರಾಧಿ. ಅವನು ನನ್ನನ್ನು ಶಪಿಸುತ್ತಿರಬಹು ದಲ್ಲ! ನನ್ನ ಅಧಿಕಾರ ಗರ್ವದಲ್ಲಿ ನಾನು ಮರೆತಿದ್ದೆ" ಎಂದು ಅಂದು ಕೊಂಡ. "ಬುಲಾವ್ ಓ ಶಿಪಾಯಿಕೊ" ಎಂದ. "ಸಾಬ ಇನಕೊ ಬಹುತ ಬುಖಾರ ಹೈ" ಎಂದು ಇನ್ನೊಬ್ಬ ಶಿಪಾಯಿ ಅಂದ. ಅವನ ಹಿಂದಿ ನಿಂದಲೇ ಪಹರೇವಾಲಾ ಬಂದ. ತನ್ನ ವೃತ್ತಿ ವೈವಿಧ್ಯತೆಗನುಗುಣವಾದ ಠೀವಿಯಲ್ಲಿಯೇ ಸೆಟೆದು ಸಲಾಂ ಹೊಡೆದ.

"ತುಮಾರಾ ನಾಮ ಕ್ಯಾ ಹೈ?" ಎಂದ ಅನಂತ.

"ಮಲ್ಲ."

"ಕ್ಯಾ ಹೈ ಜೋರಸೆ ಬೋಲೊ."

"ಮಲ್ಲ" ಎಂದು ಇಳಿಧ್ವನಿಯಲ್ಲಿಯೇ ಉತ್ತರ ಕೊಟ್ಟ. ಮಲ್ಲ ನಿಂತ ಠೀವಿ, ಕರ್ತವ್ಯ, ಭಕ್ತಿಗಳು ಹನುಮಂತನನ್ನು ಮೀರಿಸಿದಂತಿತ್ತು. ಮಲ್ಲ

ಎಂಬ ಎರಡಕ್ಷರಗಳು ಅನಂತನ ಹೃದಯದಲ್ಲಿ ವಿದ್ಯುತ್‌ಸಂಚಾರ ಮಾಡಿಸಿತು. ಮಂಕು ಹಿಡಿದವನಂತಾಗಿ "ನಿನ್ನೂರು ಯಾವದು? ನಿನ್ನ ಹೆಸರೇನು?" ಎಂದು ವಿಚಾರಿಸಿದ.

"ಕಲಬುರ್ಗಿ ನನ್ನ ಊರು, ಹೆಸರು ಮಲ್ಲ" ಅವನು ಉತ್ತರಿಸಿದ.

ಅನಂತನಲ್ಲಿ ಅನಂತ ವಿಚಾರ ತರಂಗಗಳು ಏಳಹತ್ತಿದವು. "ಮಲ್ಲನೆಂಬ ಹಿಂದೂ ಹೆಸರಾದರೆ ಗಡ್ಡವೇಕೆ? ನನ್ನ ಕೋಲಳ್ಳಿಯ ಮಲ್ಲನು ಇರಲಿಕ್ಕಿಲ್ಲವಷ್ಟೇ?" ಎಂದು ತರ್ಕಿಸಿ ಇನ್ನೊಮ್ಮೆ "ನಿನ್ನ ಹೆಸರೇನು?" ಎಂದ ಅನಂತ. "ಮಲ್ಲ" ಎಂದ ಮಲ್ಲ. "ನಿನ್ನ ಮೊದಲಿನ ಊರು ಯಾವುದೊ? ತಂದೆ-ತಾಯಿ ಯಾವೂರಲ್ಲಿರುವರು?" ಎಂದ ಅನಂತನ ಮಾತಿಗೆ "ನನಗ ತಂದೆ-ತಾಯಿ ಇಲ್ಲರಿ. ನಂದು ಮೊದಲಿನ ಊರು, ಹಾವೇರಿ ಹಂತೇಕ ಕೋಲಳ್ಳಿರಿ" ಎಂದ. ಕೋಲಳ್ಳಿ ಎನ್ನುವಾಗಲೇ ಜ್ವರದ ಬಾಧೆ ಹೆಚ್ಚಾದ್ದರಿಂದ ಎಚ್ಚರದಪ್ಪಿ ನೆಲದ ಮೇಲೆ ಬಿದ್ದುಬಿಟ್ಟ. ಅನಂತನ ಅಂತಃಕರಣ ನೀರುನೀರಾಗಿ ಹರಿಯಿತು. ಬಿದ್ದ ಮಲ್ಲನನ್ನು ತೊಡೆಯ ಮೇಲೆ ತೆಗೆದುಕೊಂಡ. ಮಲ್ಲ ಬಿದ್ದಾಗ ಅವನ ಕಿಸೆಯಲ್ಲಿಯ ಪತ್ರ ಕೆಳಗೆ ಬಿತ್ತು. ಅನಂತ ಓದಿ ನೋಡಿದ. ಇದ್ದೊಬ್ಬ ಆಪ್ತರು ತೀರಿದ್ದು ಅದರಲ್ಲಿತ್ತು. ಆಪ್ತ ತೀರಿದ ಸುದ್ದಿಯನ್ನು ಕರ್ತವ್ಯದ ಕಪಾಟಿನಲ್ಲಿ ಬಚ್ಚಿಟ್ಟು ಕಾರ್ಯ ಮಾಡಿದ ಮಲ್ಲ ನಿಜವಾಗಿಯೂ ಮದಗಜಮಲ್ಲ! ಸತ್ಯವಾಗಿಯೂ ಮಲ್ಲ!! ಅನಂತನ ಕಣ್ಣೀರು ಮಲ್ಲನನ್ನು ತೊಳೆದವು. ಎಚ್ಚತ್ತ ಮಲ್ಲ "ಸಾಬ" ಅಂದ. "ನಾನು ಕೋಲಳ್ಳಿಯ ನಿನ್ನ ಅನಂತ" ಎಂದನು ಅನಂತ. ಮಲ್ಲನ ಕಣ್ಣೊ ಹನಿಗೂಡಿದವು. ಇಬ್ಬರ ಆತ್ಮಗಳೂ ಬೆರತವು. ಅನಂತನ ಸತ್‌ಸಂಗದಲ್ಲಿ ದುಡಿಯುವ ಭಾಗ್ಯಕ್ಕಾಗಿ ಮಲ್ಲ ಹಿಗ್ಗಿದನು. ಲಚ್ಚಮ್ಮನಿಗೆ ವಚನ ಕೊಟ್ಟಿದ್ದ ಮಾತು ಅನಂತನ ಮನದಲ್ಲಿ ಮೂಡಿತು. ಲಚ್ಚವ್ವ, ಕಮಲಾಬಾಯರು ಕೈಲಾಸದಿಂದ ಹರಸಲಿ ಎಂದುಕೊಂಡ. ಅನಂತನ ಶಕ್ತಿಸಂಚಯಕ್ಕೆ ಇನ್ನೊಂದು ಪ್ರವಾಹ ಬಂದು ಕೂಡಿತು. "ನಾನು ನವಕರಿ ಸೇರಿ ಬಹಳ ದಿನಾ ಆದರೂ ನಿನ್ನ ಬಗ್ಗೆ ಗೊತ್ತಿದ್ದಿಲ್ಲ. ಎಂದ ಮಲ್ಲ. "ಮಲ್ಲ, ಗಡ್ಡ ಯಾಕೋ" ಎಂದ ಅನಂತ. "ಕಳ್ಳರ ಬೆನ್ನು ಹತ್ತಿ ಓಡುವಾಗ ಒಂದಿನ ನಾಯಿ ಕಡೀತು, ನಂಜ ಆಗಬಾರದಂತ ಬಿಡಿಸೀನಿ" ಅಂದ. ಇಬ್ಬರೂ ನಗುತ್ತ

ಅನಂತನ ಮನೆಗೆ ಬಂದರು. ಯೋಗಕ್ಷೇಮ ಮುಗಿಯಿತು. ಹಣೆಯಲ್ಲಿ ಬರೆದದ್ದೆಲ್ಲ ಆಗಲೇಬೇಕಲ್ಲವೆ?

ಮಲ್ಲನನ್ನು ಜಮಾದಾರ ಹುದ್ದೆಗೆ ಏರಿಸಿದ ಸಾಹೇಬರ ಆರ್ಡರು ಮರು ದಿನವೇ ಹೊರಟಿತು. ಪೋಲೀಸರಲ್ಲಿ ಮಲ್ಲನೆಂದರೆ ಮಲ್ಲನೆ. ದುಡಿಯುವದೆಂದರೆ ಮಲ್ಲನಿಗೆ ಹುರುಪು. ಆಸರವಿಲ್ಲ, ಬೇಸರವಿಲ್ಲ.

ಕರೀಮ-ರಹೀಮರಲ್ಲದೇ ಮಲ್ಲನೂ ಒಬ್ಬ ಅನಂತನ ಕಾರ್ಯ ಸಾಗಿಸುವ ವಾಹನವಾದ. ಅನಂತನಿಗೆ ನೂರು ಗಜಬಲದಷ್ಟು ಶಕ್ತಿ ದೊರೆತಂತಾಯಿತು. ಬೀದರ ಜಿಲ್ಹೆಗೆ ಈ ನಾಲ್ವರು ಪ್ರವಾದಿ ಪುರುಷರಂತೆ ಆದರು. ಭಯ್ಯಾ, ಕರೀಮರಿಗೆ ಮಲ್ಲನ ಪರಿಚಯವಾಯಿತು. ಭಯ್ಯಾ 'ನಮ್ಮ ಕೆಲಸಕ್ಕೆ ಇನ್ನೊಬ್ಬ ಅಧ್ವರ್ಯು ದೊರೆತನು" ಎಂದ. ಬರಬರುತ್ತ ಭಯ್ಯಾ, ಮಲ್ಲರ ಗೆಳೆತನ ಒಂದು ಸಿದ್ಧಿ ಮುಟ್ಟಿತು.

ಜಾತಿಯೋ ಸರಕಾರದ ಸೂತ್ರವಾಗಿದ್ದರೂ ಅನಂತನ ಕೆಲಸ ಅಧಿಕಾರಿಗಳನ್ನು ಮುಗ್ಧರನ್ನಾಗಿ ಮಾಡಿತು. ಆದರೆ ವಾತಾವರಣವೇ ಬೇರೆಯಿತ್ತು. ಒಮ್ಮೊಮ್ಮೆ ಅಧಿಕಾರಿಗಳೂ ವೇಳೆಯ ಒತ್ತಡಕ್ಕೆ ಒಳಗಾಗಿ ನಿಸ್ಸಾಯಕರಾಗುತ್ತಿದ್ದರು. ಅನಂತನ ವಿರುದ್ಧ ಹೊತ್ತುತ್ತಿದ್ದ ಕಿಡಿ ಆಗಲೇ ವ್ಯಾಪಿಸಿತ್ತು. ಕೈಕೆಳಗಿನ ಕೆಲ ನೌಕರರು ಅನಂತನ ಕೆಲಸಕ್ಕೆ ಧರ್ಮದ ಬಣ್ಣ ಬರೆದು ವರ್ಗಾಯಿಸಲು ಕೇಳಿಕೊಂಡರು. ಮೌಲವಿಗಳು ಅನಂತನನ್ನು ಅಧಿಕಾರದಿಂದ ತೆಗೆಯುವಂತೆ ಗುಪ್ತ ಯತ್ನ ನಡೆಸಿದರು. ಜಾತೀಯ ಬೀಜ ಬಿತ್ತಿ ಅದನ್ನು ವೃಕ್ಷವನ್ನಾಗಿ ಬೆಳೆಸಲು ಹವಣಿಸಹತ್ತಿದರು. ವೇಳೆ ಬಂದರೆ ಅನಂತನನ್ನೆ ಆಹುತಿ ತೆಗೆದುಕೊಳ್ಳಬೇಕು ಎಂಬ ಠರಾವು ರಜಕಾರರ ಸಭೆಯಲ್ಲಿ ಸರ್ವಾನುಮತದಿಂದ ಪಾಸಾಯಿತು. ಅನಂತನ ಆಟ ಇನ್ನೂ ನಡೆಯಬೇಕಾಗಿದೆ!

ಶುಕ್ರವಾರ ರಮಜಾನ. ಮಸೀದೆಯಲ್ಲಿ ಜನ ಸೇರಿದೆ. ಪೂಜ್ಯ ಪೈಗಂಬರರ ಹೆಸರು ಬಾರಿಬಾರಿಗೂ ಕೇಳಿಸಹತ್ತಿದೆ. ಕಾಷಾಯ ಬಣ್ಣದ ಶಿಲ್ಕಿನ ನಿಲುವಂಗಿ ಧರಿಸಿದ ಧರ್ಮಗುರುಗಳು ಬಂದರು. ಎಲ್ಲರೂ ಶಾಂತರಾದರು. ಗುರುಗಳ ಕಣ್ಣುಗಳಿಂದ ಕ್ರೋಧದ ಕಿಡಿಗಳು ಹಾರುತ್ತಿದ್ದವು. ಅನಂತನ ಪಕ್ಷ ವಹಿಸಿದ್ದಕ್ಕಾಗಿ ನಿರಪರಾಧಿ ಬಡಜನರಿಂದ ಹತ್ತು ರೂಪಾಯಿ ವಸೂಲು ಮಾಡಲು

ಫರ್ಮಾನು ಹೊರಟಿತು. ಮೂಢ ಸಂಪ್ರದಾಯದ ಮುಗುದಾಣದಿಂದ ನೆರೆದ ಜನಗಳು ಕವಲೆತ್ತಿನಂತೆ ತಲೆಹಾಕಿ ' ಹೂಂ ' ಎಂದರು. ಗುರುಗಳು " ಭಯ್ಯಾ ಕಾಫರ ಹೈ " ಎಂದರು. ಭಯ್ಯಾ, ಕರೀಮರನ್ನು ಧರ್ಮದ್ರೋಹಿ ಗಳೆಂದು ಸಾರಿದರು. ಕಾಲನ ರೂಪವಾಗಿದ್ದ ಗುರುಗಳು " ಹಿಂದೂ ಲೋಗೋಂಕೋ " ಎಂದರು. ಕೆಲವು ಜನ " ಮುಸಲ್ಮಾನ ಕರೇಂಗೇ " ಎಂದರು. ಸಿಟ್ಟಿಗೆದ್ದ ಸ್ವಾಮಿಗಳು " ಯೇ ಕ್ಯಾ ? ಸಬ್ ಕೆಂವ ನಹೀ ಬೋಲತೇ ? ಬೋಲೋ, ಜೋರಸೇ ಬೋಲೋ " ಎಂದರು. ಜನತೆ ನಡು ಗಿತು. ಮಗ್ಗುಲದಲ್ಲಿ ಕುಳಿತಿದ್ದ ಭಯ್ಯಾ ಎದ್ದು " ಧರ್ಮಗುರುಗಳಿಗೆ—ಪೌಲ್ವೀ ಸಾಬಕೋ " ಎಂದನು. ಅವನ ಅನುಯಾಯಿಗಳು " ಬಹಿಷ್ಕಾರ " ಎಂದರು. ಆ ಧ್ವನಿ ಜಾತ್ಯಾಂಧರ ಹೃದಯ ಭೇದಿಸಿತು. ಸ್ವಾಮಿಗಳು " ಅಲ್ಲಾ ಅಲ್ಲಾ, ಏ ಕ್ಯಾ ಹೈ " ಎಂದು ಒದರಿದರು. ಮಸೀದಿಗಾಗಿ ಎತ್ತಿದ ಹಣ, ತರುಣಿಯ ರನ್ನು ಶುದ್ಧ ಮಾಡಲು ಹೂಡಿದ ಆಟ, ಕಲ್ಲಿನ ಮನೆಯನ್ನು ಕಟ್ಟಿಸಿದ ಕಥೆ ಎಲ್ಲವೂ ಬಯಲಿಗೆ ಬಂದವು. ಸ್ವಾರ್ಥಕ್ಕಾಗಿ ಜಾತಿಯು ಒಂದು ಒಳ್ಳೆಯ ಅಸ್ತ್ರ ವಾಗಿದೆಯಲ್ಲವೆ? ಇನ್ನು ಆರು ತಿಂಗಳಲ್ಲಿಯೇ ಇಲ್ಲಿ ಸರ್ವಧರ್ಮ ಸಮ್ಮೇಳನ ನಡೆ ಯುವದೆಂದು ಭಯ್ಯಾ ಸಾರಿದನು.

ಸ್ವಾಮಿಗಳು ಅನಂತ, ಭಯ್ಯಾರ ಕೃತಿಗಳಿಗೆ ಬಣ್ಣ ಕೊಟ್ಟು ರಜಾಕಾರರ ರಾಜರಿಗೂ ಸರಕಾರಕ್ಕೂ ಬರೆದು ಕಳಿಸಿದರು. ಅನಂತ, ಭಯ್ಯಾ, ಕರೀಮ ಮತ್ತು ಮಲ್ಲರು ಸರಕಾರದ ದೃಷ್ಟಿಯಲ್ಲಿ ಆರೋಪಿಯ ಕಕ್ಷೆಯಲ್ಲಿ ಕಂಡರು.

ಹೈದ್ರಾಬಾದಿಗೆ ಹೋಗಿದ್ದ ಸಾಹೇಬರೂ ಬಂದರು. ನಡೆದ ಪುರಾಣ ಕೇಳಿದರು. ಕೆಂಡ ಕಾರಿದರು. ಅನಂತನಿಂದ ಕಾರಣವನ್ನು ಕೇಳಿದರು.

ಭಯ್ಯಾ ಮತ್ತು ಮಲ್ಲನ ಪ್ರೀತಿ ದಿನದಿನ ಬೆಳೆಯುತ್ತಲೇ ನಡೆಯಿತು. ಭಯ್ಯಾನ ಮನೆಯೇ ಮಲ್ಲನದಾಯಿತು. ತನ್ನವರಾರೂ ಲೋಕದಲ್ಲಿ ಇಲ್ಲದಿರು ವಾಗ ಭಯ್ಯಾನಂಥ ಆಪತ್‌ಬಾಂಧವನನ್ನು ಒದಗಿಸಿಕೊಟ್ಟ ಅನಂತನನ್ನು ಮಲ್ಲ ಮನದಲ್ಲಿಯೇ ನೆನೆದನು. ಕರೀಮನಿಗೆ ತಂದೆ ಇಲ್ಲ, ತಾಯಿ ಇಲ್ಲ. ತಾನು ಯಾರೆಂಬುದೂ ಸಹ ಗೊತ್ತಿಲ್ಲ, ದಿಕ್ಕಿಲ್ಲದ ಪರದೇಶಿ.

ಕರೀಮ, ಭಯ್ಯಾರ ಅವಿರತ ಕೆಲಸವು ಕೆಲವು ಮುಸಲ್ಮಾನರನ್ನೂ ' ಶಾಂತಿಸಂಘದ ಸದಸ್ಯರನ್ನಾಗಿ ಮಾಡಿತು. ಅನಂತ, ಮಲ್ಲರ ಅಹೋರಾತ್ರಿ

ದುಡಿತ ಹಿಂದೂ ಜನರಲ್ಲಿ ಹೊಸ ವಿಚಾರ ಹುಟ್ಟಿಸಿತು. ಅನಂತ, ಮಲ್ಲ ಮತ್ತು ಕರೀಮರು ಸರಕಾರೀ ಅಧಿಕಾರದಲ್ಲಿ ಇದ್ದದ್ದರಿಂದ ಅಪ್ರತ್ಯಕ್ಷವಾಗಿ ಕೆಲಸಮಾಡುತ್ತಿದ್ದರು. ಭಯ್ಯಾನ ಪವಿತ್ರವಾದ ಕೆಲಸವು ಕೆಲವು ಮುಸ್ಲಿಂ ಸ್ತ್ರೀಯರ ಕಣ್ಣು ತೆರೆಯಿಸಿತು. ಭಯ್ಯಾನ ತಂಗಿ ಸ್ತ್ರೀ ಕೆಲಸಗಾರಳಾದಳು. ಸ್ತ್ರೀಯರ ಸಲುವಾಗಿ ದುಡಿಯಲು ಕಂಕಣ ಕಟ್ಟಿದಳು. ಅನಂತನು ಕಂಡ ಸಾವಿರಾರು ಸ್ತ್ರೀ ರತ್ನಗಳಲ್ಲಿ ಶಮಾ ಕೊಹಿನೂರ ರತ್ನವಾಗಿದ್ದಳು. ಅನಂತನ ಹೃದಯದಲ್ಲಿ ಶಮಾಳಿಗೂ ಒಂದು ಸ್ಥಾನ ಸಿಕ್ಕಿತು. ಆದರೆ ಅದು ಸಹೋದರ ಸ್ಥಾನ. ಆಗಲೇ ಅನಂತನ ಹೃದಯದಲ್ಲಿ ಸ್ಥಳವನ್ನು ಸರೋಜ ದೊರಕಿಸಿದ್ದಾಳಷ್ಟೆ?

ಸಾಹೇಬನ ಕಾಕದೃಷ್ಟಿ ಅನಂತನನ್ನು ಕಾಡಹತ್ತಿತು. "ಅನಂತರಾವ, ಆಪ ಮುಸಲ್ಮಾನ ಕಬ ಹೋಯೇಗಾ?" ಎಂದರು ಸಾಹೇಬರು. "ತೀನ ಮಹಿನೇಕೆ ಬಾದ" ಎಂದ ಅನಂತ. "ಜೇಗನೆ ಆದ್ರ ಒಳ್ಳೇದು. ತರಕ್ಕೀ ಇನ್ನೂ ಸಿಗತದ ನಿಮಗ. ನಮ್ಮ ಮ್ಯಾಲಿನ ಸಾಹೇಬ ಆಗತೀರಿ" ಎಂದು ವಿಷತುಂಬಿದ ನಗೆಯಿಂದ ಸಾಹೇಬರೆಂದರು.

ಒಂದು ಮಧ್ಯಾಹ್ನ ಮಲ್ಲ ಕೆಲಸ ಹೆಚ್ಚಾಗಿದ್ದರಿಂದ ಭಯ್ಯಾನ ಮನೆಯಲ್ಲಿ ಮಲಗಿದ್ದ. ಮಲ್ಲ ಇರುವದು ಭಯ್ಯಾನಲ್ಲಿಯೆ; ಹೊರಗಿನಿಂದ ಬಂದ ಶಮಾ "ಭಯ್ಯಾ ಭಯ್ಯಾ" ಎನ್ನುತ್ತ ಖೋಲಿಯಲ್ಲಿ ಹೋದಳು. ಗಾಳಿಗೆ ಕದಗಳು ಮುಚ್ಚಿಕೊಂಡವು. 'ಭಯ್ಯಾ' ಎನ್ನುತ್ತ ಮುಸುಗನ್ನು ತೆರೆದಳು. ಆದರೆ........ ಆಜಾನುಬಾಹು ದೇಹವುಳ್ಳ ಕಪ್ಪು ವರ್ಣದ ಶರೀರ ಕಂಡಿತು. ಆಚ್ಚರಿಯಿಂದ ಗಾಬರಿಯಾದಳು. ಕಾಲುಗಳು ಹೊರಗೆ ಹೋಗಲೆತ್ನಿಸಿದರೂ ಮನ ನಿಲ್ಲಿಸಿತು. ಮಲ್ಲನ ಮುಖದ ಮೇಲೆ ಪ್ರಕಾಶ ಮಿನುಗುತ್ತಿತ್ತು. ಹೃದಯ ನಿಷ್ಕಲ್ಮಷವಾದುದೆನ್ನುವಂತೆ ದೇಹವನ್ನೆಲ್ಲ ವಿಲಕ್ಷಣ ಕಾಂತಿ ಆವರಿಸಿತ್ತು. ಮಲ್ಲನ ಮೇಲೆ ಅಂಜುತ್ತ ಕೈ ಇಟ್ಟಳು. ಅಭೂತಪೂರ್ವ ಅನುಭವ ದೊರೆತಂತಾಗಿ ಶಮಾಳ ದೇಹವೆಲ್ಲ ರೋಮಾಂಚಗೊಂಡಿತು. ಮೈಯಲ್ಲಿಯೂ ಬೆವರೊಡೆಯಿತು. ಅಂಜಿದಳು. ಹೊರಗೆ ಹೋಗಲು ಓಡಿದಳು. ಮಲಗಿದ ಮಲ್ಲನ ರೂಪ ಸೆರೆಹಿಡಿಯಿತು. ಅಪರಾಧಿಯಂತೆ ನಿಂತಳು. ಆ ಕರಸ್ಪರ್ಶವು ಮಲ್ಲನಿಗೆ ಹೊಸ ಜೀವ ನೀಡಿತು. ಎದ್ದು ಕುಳಿತ. ಎದುರಿನಲ್ಲಿ ಕ್ಷಮೆ, ದಯೆಯ ಮೂರ್ತಿ ಮುಗ್ಧ ಶಮಾ. ಭ್ರಾಂತಿಗೊಂಡ. ಶಮಾಳ

ತುಂಬಿದ ಗಲ್ಲ, ಗುಲಾಬಿ ಬಣ್ಣದ ದೇಹ, ತೇಜಸ್ವಿಯಾದ ಕಣ್ಣುಗಳು ಮಲ್ಲನನ್ನು ಮುಗ್ಧಗೊಳಿಸಿದವು. ಶಮಾನ ಕಣ್ಣುಗಳಲ್ಲಿ ದೈವೀ ಕಳೆ ಮಿಂಚಿತು.

ಒಮ್ಮೆಲೆ ದಾರಿ ತಪ್ಪಿದವನಂತೆ "ಶಮಾ" ಎಂದ. ಅವನ ಧ್ವನಿ ಯಲ್ಲಿ ದೇಹದ ಕೊರಗು ಕೂಡಿತ್ತು. ಆ ಕೊರಗಿಗೆ ಉತ್ತರವೆಂಬಂತೆ "ಮಲ್ಲ" ಎಂದಳು. ಬಹುದಿನದಿಂದ ರಸನಿಮಿಷಕ್ಕಾಗಿ ಕಾದಿದ್ದ ಜೀವಗಳು ಪ್ರೀತಿರಸ ಈಂಟಿದವು. ಬಾಗಿಲ ಸಪ್ಪಳವು ಕಲ್ಪನಾಲೋಕದಿಂದ ಶಮಾ, ಮಲ್ಲರನ್ನು ನೈಜ ಲೋಕಕ್ಕೆ ತಂದಿತು. ನಿಸರ್ಗ ನಿಯಮಕ್ಕೆ ಅಧೀನನಾದ ಮಲ್ಲನು ನಿಸ್ಸಹಾಯನಾಗಿದ್ದನು. ಶಮಾಳೂ ಸ್ತ್ರೀ ಅಲ್ಲವೆ ?

ಮಲ್ಲನ ಮೇಲಿನ ಶಮಾಳ ಪ್ರೀತಿ ನಾಚಿಕೆಯ ನೈಜರೂಪ ತಾಳಿತು. ನಾಚುವದು ಸ್ತ್ರೀ ಧರ್ಮ. ಮಲ್ಲ ಶಮಾರ ಸಮಾಗಮದ ಸುಳಿಗಾಳಿ ಭಯ್ಯಾ-ಅನಂತರಿಗೂ ತಾಕಿತು. ಆ ಮಂಗಳಮಯ ವೇಳೆ ಬೇಗನೇ ಬರಲೆಂದು ಭಯ್ಯಾ-ಅನಂತರೂ ಇಚ್ಛಿಸಿದರು.

ರಜಾಕಾರರ ಚಟುವಟಿಕೆಗಳು ಬೈಲಿಗೆ ಬರಹತ್ತಿದವು. ಅಲ್ಲಲ್ಲಿ ಜಾತೀಯ ದಂಗೆಗಳಾದ ವರದಿ ಬರಹತ್ತಿದವು. ಮುಸಲ್ಮಾನರ ಆಕ್ರಮಣಶೀಲತೆ, ಅನೀತಿ, ಅತ್ಯಾಚಾರಗಳು ಉಲ್ಬಣಾವಸ್ಥೆಯನ್ನು ಮುಟ್ಟಿದವು. ಸರಕಾರದ ಕಣ್ಣು ಮುಚ್ಚಾಲೆ ಆಟ ಅನಂತನನ್ನು ಹತಾಶನನ್ನಾಗಿ ಮಾಡಿತು. ಅನಂತನ ವಿರುದ್ಧ ದೊಡ್ಡ ಸಂಚೂ ನಡೆಯಿತು.

ಮರುದಿನವೇ ರಾಯಚೂರಿಗೆ ವರ್ಗವಾದ ಆರ್ಡರು ಅನಂತನಿಗೆ ಬಂದಿತು. 'ಸರ್ವಧರ್ಮ ಸಮ್ಮೇಳನ'ದ ಬಗ್ಗೆ ಭಯ್ಯಾ, ಕರೀಮರು ವ್ಯಾಕುಲರಾದರು. "ವೇಳೆ ಬರಲಿ, ಸರ್ವಧರ್ಮ ಸಮ್ಮೇಳನವೇ ಏಕೆ? ಸರ್ವ ಧರ್ಮಕ್ಕಾಗಿ, ಸರ್ವರ ಕಲ್ಯಾಣಕ್ಕಾಗಿ, ಜೀವದಾನವನ್ನು ಮಾಡೋಣ. ನೀವು ಮಾತ್ರ ಎಚ್ಚರದಿಂದ ಇರ್ರಿ" ಎಂದ ಅನಂತ. ಭಯ್ಯಾ, ಕರೀಮರು "ಹೌದು, ಒಳ್ಳೇ ಕೆಲಸಕ್ಕೆ ನಾವು ಜೀವದಾನ ಮಾಡಲಿಕ್ಕೇ ಬೇಕು" ಎಂದರು. ಶಮಾಳಿಗೂ ನಾಲ್ಕು ಮಾತು ಹೇಳಿದನು. "ಮಲ್ಲನನ್ನು ಕಾಯೋದು ನಿನ್ನ ಕೆಲಸ" ಎಂದು ಅನಂತ ಅಂದಾಗ ಎಲ್ಲರೂ ನಕ್ಕರು. ಆದರೆ ಅನಂತನ

ಜೀವನದಲ್ಲಿ ಹಾಸುಹೊಕ್ಕಾಗಿ ಬೆಳೆದ ಮಲ್ಲ, ಭಯ್ಯಾರಿಗೆ ಈ ಅಗಲುವಿಕೆಯು ತಾಪದಾಯಕವಾಯಿತು. ಆದರೆ ಅದು ಅನಿವಾರ್ಯವಾಗಿತ್ತಲ್ಲವೆ?

ಕೋಲಳ್ಳಿಗೂ ಧಾರವಾಡಕ್ಕೂ ಓಲೆ ಬರೆದ. ಎಲ್ಲರಿಗೂ "ಮತ್ತೊಮ್ಮೆ ಬರತೀನಿ ಕಾಳಜೀ ಮಾಡಬ್ಯಾಡ್ರಿ, ಎಲ್ಲಿದ್ದರೂ ನಾ ನಿಮ್ಮವ" ಎಂದು ಕೈಮುಗಿದು ಗಾಡಿ ಹತ್ತಿದ. ಕೊನೆಗೊಮ್ಮೆ ಬೀದರಿನಿಂದ ಬಿಡುಗಡೆ ಹೊಂದಿದ.

## ೧೪

ಹೊಸ ವಾತಾವರಣವಿದ್ದರೂ ಅದಕ್ಕನುಕೂಲವಾಗುವ ಮನಸ್ಸು ಅನಂತನಲ್ಲಿ ಇದ್ದದ್ದರಿಂದ ನಿರಾತಂಕವಾಗಿ ಮೊದಲಿನಂತೆಯೇ ತನ್ನ ಕೆಲಸ ಮಾಡಹತ್ತಿದನು. ಬಂದ ಕೆಲವೇ ದಿನಗಳಲ್ಲಿ ಎಲ್ಲವೂ ಸರಿಹೋಯಿತು.

"ಯಾರಾದರೂ ಕೇಳಿದರೆ ಇನ್ನೆರಡು ತಿಂಗಳಲ್ಲಿ ಮುಸಲ್ಮಾನನಾಗಿ ಹಿಂದೂ ಸ್ತ್ರೀಯರನ್ನೂ ಮುಸಲ್ಮಾನರನ್ನಾಗಿ ಮಾಡುತ್ತೇನೆ, ಅಂತ ಹೇಳು" ಎಂದು ಬರೆದ ಡಿ. ಆಯ್. ಜಿ. ಕಾದರಿಯವರ ಓಲೆ ಬಂತು. ಅನಂತನಿಗೆ ಏನೊಂದೂ ಅರ್ಥವಾಗಲಿಲ್ಲ.

ಅದರ ಬೆನ್ನು ಹಿಂದೆಯೇ ಅನಂತನಿಗೆ ರಾಯಚೂರಿನ ಡಿ. ಎಸ್. ಪಿ. ಆದ ಆರ್ಡರು ಬಂದಿತು. ಇದಕ್ಕಾಗಿ ಕಾದರೀ ಸಾಹೇಬರನ್ನು ಸಾವಿರ ಸಲ ನೆನೆದ. ದಟ್ಟವಾದ ವನ್ಯ ಪ್ರದೇಶದಲ್ಲಿಯೂ ಒಂದು ಸುವಾಸನೆ ಬೀರುವ ಗಂಧದ ಗಿಡ ಇರುವದು ಸೃಷ್ಟಿ ನಿಯಮ. ಕಾದರಿಯವರಿಗೆ ಪತ್ರ ಬರೆಯಬೇಕೆಂದು ಯೋಚಿಸಿದ. ಆದರೆ ಕಾದರೀ ಸಾಹೇಬರ ಗೆಳೆಯರೊಬ್ಬರು ಬಂದು ಬೇಡವೆಂದರು. ಹಿಂದಿನಿಂದ ಅವರು ಅನಂತನಿಗೆ ನಡೆದ ತಂತ್ರಗಳನ್ನೆಲ್ಲ ವಿವರಿಸಿದರು.

ಈಗ ಅನಂತ ಸಾಹೇಬ! ದೊಡ್ಡ ಅಧಿಕಾರಿ. ಮನವೂ ಅಷ್ಟೇ ದೊಡ್ಡದಾಯಿತು. ಜಿಲ್ಹೆಯ ಪ್ರತಿ ಹಳ್ಳಿಗೂ ಭೆಟ್ಟಿ ಕೊಟ್ಟ. ಹಿಂದೂ-ಮುಸಲ್ಮಾನ ಮುಖಂಡರನ್ನು ಬೇರೆ ಬೇರೆಯಾಗಿ ಕರೆಸಿ ತಿಳಿ ಹೇಳುತ್ತಿದ್ದ. ಹಾದಿಗೆ ಬರ

ದಿದ್ದಲ್ಲಿ ಅನಿವಾರ್ಯವಾಗಿ ಅಧಿಕಾರದ ಬಲವನ್ನು ಉಪಯೋಗಿಸುತ್ತಿದ್ದ. ಅಪರಾಧ ಅತ್ಯಾಚಾರಗಳ ಉಚ್ಚಾಟನೆ ಮಾಡುವದರಲ್ಲಿ ಉಗ್ರವಾಗಿಯೇ ಇರುತ್ತಿದ್ದ. ಜಾತೀಯ ಜಾಡ್ಯಕ್ಕೆ ಉಪದೇಶ, ಹಿತದ ಮಾತುಗಳ ಔಷಧವಲ್ಲದೆ ಅಧಿಕಾರ ಬಲದ ಇಂಜೆಕ್ಶನ್ನೂ ಮೇಲಿಂದ ಮೇಲೆ ಕೊಡಹತ್ತಿದ. ಆದರೆ ಆ ಜಾಡ್ಯ ಸುಲಭವಾಗಿ ಗುಣವಾಗುವ ಜಾಡ್ಯವಲ್ಲ.

ರಾಯಚೂರಿಗೆ ಸಮೀಪದ ಒಂದು ಹಳ್ಳಿ. ಅಲ್ಲಿ ರಜಾಕಾರರ ಉಪಟಳ ಹೆಚ್ಚಾಗಿದೆಯೆಂಬ ಸುದ್ದಿ ಬಂದಿತು. ಅನಂತನ ಮೈಯಲ್ಲಿ ಆರಾಮು ಕೂಡ ಇದ್ದಿರಲಿಲ್ಲ. ಆದರೂ ಜನತೆಯ ವಿತ್ತಜೀವನ ಗಂಡಾಂತರದಲ್ಲಿದೆ ಎಂದ ಮೇಲೆ ನಿಲ್ಲುವದು ಹೇಗೆ? ಕೈಕೆಳಗಿನ ರಾಮುಸಿಂಗನನ್ನು ಸಂಗಡ ಕರೆದು ಕೊಂಡು ಹೋದ. ಊರ ಜನರ ಸಹಾಯದಿಂದ ರಜಕಾರರ ತಂಡವನ್ನು ಸೆರೆ ಹಿಡಿದ. ಆದರೆ ಆ ತಂಡದವರೆಲ್ಲ ಹಿಂದುಗಳೇ ಇದ್ದರು. ಅನಂತನಿಗೆ ಆಶ್ಚರ್ಯವಾಯಿತು. ವೇಳೆಯ ದುರುಪಯೋಗವನ್ನು ತೆಗೆದುಕೊಂಡು ಹಿಂದುಗಳೇ ರಜಾಕಾರರ ಹೆಸರಿನಲ್ಲಿ ಕೊಲೆ, ಕೊಳ್ಳೆ, ಸುಲಿಗೆ ನಡೆಸಿದ್ದಾರೆಂದು ಗೊತ್ತಾಯಿತು. ಅನಂತನ ಪಿತ್ತ ನೆತ್ತಿಗೇರಿತು. ಕೆಲವು ಜನರಿಗೆ ಚೆನ್ನಾಗಿ ಥಳಿಸಿದನು. ಆಗ ಮಾತ್ರ ಅನಂತನ ಸಿಟ್ಟು ಸ್ವಲ್ಪ ಶಾಂತವಾಯಿತು. ಅಪರಾಧಿಗಳೆಲ್ಲರಿಗೂ ಯೋಗ್ಯ ಶಿಕ್ಷೆಯಾಗುವಂತೆ ಮುಂದಿನ ಕೆಲಸ ಮಾಡಿದನು. ಊರ ಜನರಿಗೆ ರಕ್ಷಣೆಯ ಆಶ್ವಾಸನವನ್ನೂ ಕೊಟ್ಟನು.

ಮತ್ತೊಂದು ದಿನ ಇನ್ನೊಂದು ಹಳ್ಳಿಯಲ್ಲಿ ದಾಳಿಯಾಗುವ ಸುದ್ದಿ ಬಂದದ್ದರಿಂದ ಗುಪ್ತವೇಷ ಧರಿಸಿ ದಿನವೆಲ್ಲ ಆ ಹಳ್ಳಿಯಲ್ಲಿಯೇ ಕಳೆದ. ಊಟವಿದ್ದಿದ್ದಿಲ್ಲ. ಕೆಲಸ ಅಧಿಕವಾಗಿದ್ದರಿಂದ ಆಯಾಸ ಹೆಚ್ಚಾಯಿತು. ಆದರೆ ದರೋಡೆಗಾರರಿಗೆ ವಾಸನೆ ಬಡಿದದ್ದರಿಂದ ತಮ್ಮ ದಾಳಿಯನ್ನು ಮುಂದೂಡಿದರು. ದಣಿದ ಅನಂತ ರಾಯಚೂರಿಗೆ ಬಂದ.

ಇಡಿ ರಾತ್ರಿ ಕೆಲಸದಲ್ಲಿಯೇ ಕಳೆದ. ಜಿಲ್ಹೆಯ ಪ್ರತಿ ಮೂಲೆಯಿಂದ ನಿತ್ಯವೂ ಸುದ್ದಿಗಳು ಬರುವಂತೆ ವ್ಯವಸ್ಥೆ ಮಾಡಿದ.

ಮರುದಿನ ಮುಂಜಾನೆ ಒಂಬತ್ತು ಬಡೆದರೂ ಹಾಸಿಗೆಯಿಂದ ಏಳಲಿಲ್ಲ. ರಾಮುಸಿಂಗ ಬಂದು ನೋಡಿದ. ಎಚ್ಚರವಿಲ್ಲ. ಮೈಯಲ್ಲಿ ಬೆಂಕಿ

ಇಟ್ಟಂತೆ ಜ್ವರವಿತ್ತು. ' ಸಾಬ ಸಾಬ ' ಎಂದ. ಎಚ್ಚರವಿದ್ದಿಲ್ಲ. ಗಾಬರಿಯಾಗಿ ದವಾಖಾನೆಗೆ ಒಯ್ದ.

* * * *

ಅನಂತ ಕಣ್ಣು ತೆರೆದ. ಎಲ್ಲವೂ ವಿಚಿತ್ರ ಕಂಡಿತು. ಹಳೆಯದೆಲ್ಲ ಹಳಸಿ ಹೋಗಿತ್ತು. ಸುತ್ತಲೂ ತನ್ನಂತೆ ಆರೈಕೆ ಪಡೆಯುತ್ತಿರುವ ನೂರಾರು ಜನರ ಮಂಚಗಳನ್ನು ನೋಡಿದನು. ' ನೀರು ' ಎಂದ. ಮಗ್ಗುಲದಲ್ಲಿಯ ರಾಮು ಸಿಂಗ ಸಬ್ ಇನಸ್ಪೆಕ್ಟರು ನೀರು ಕೊಟ್ಟರು. " ರಾಮುಸಿಂಗ, ಇಲ್ಯಾಕ " ಎಂದರು. " ಸಾಬ, ಆಪ ಸೋಯಿಯೆ " ಎಂದ ರಾಮುಸಿಂಗ.

ಅನಂತನಿಗೆ ಪೂರ್ಣ ಎಚ್ಚರ ಬಂದಿತು. ಡಾಕ್ಟರರು ಬಂದರು. " ರಾಮು ಸಿಂಗ, ಸಾಹೇಬರ್‍ನ ನೀ ತರದಿದ್ರ ಕಠಿಣ ಇತ್ತು. ಸಾಹೇಬರಿಗೆ ಯಾರೋ ಎರಡು ಮೂರು ದಿನದ ಹಿಂದೆ ಭಯಂಕರ ವಿಷ ಹಾಕಿರಬೇಕು. ಅದಕ್ಕ ಸಾಹೇಬರಿಗೆ ಇನ್ನೂ ಗುಂಗು ಅದ. ಅವರು ಇಲ್ಲೆ ಇರೋತನಕಾ ನೀ ಇರು " ಎಂದರು. ರಾಮುಸಿಂಗನ ನಾಡಿಗಳು ಕ್ಷಣಹೊತ್ತು ಮಂದವಾದವು. " ಸಾಬ " ಅಂದ. " ಯಾಕ " ಎಂದ ಅನಂತ. ಅನಂತನ ರಜೆಯ ರಿಪೋರ್ಟನ್ನು ಡಾಕ್ಟರರು ಆಗಲೇ ಕಳಿಸಿದ್ದರು.

ದಿನಾಲೂ ಡಾಕ್ಟರರು ಬರುತ್ತಿದ್ದರು. ಅವರ ಹಿಂದೆಯೇ ದವಾಖಾನೆಯ ಕಿನ್ನರಿ ಸ್ತ್ರೀಯರು ಬಂದು ಚುಚ್ಚುಮದ್ದು ಚುಚ್ಚಿ ಹಾರಿ ಹೋಗುತ್ತಿದ್ದರು. ಅನಂತನಿಗೆ ದಿನ ದಿನಕ್ಕೆ ಗುಣವಾಗಹತ್ತಿತು. ಆದರೆ ಹೊಟ್ಟೆಯಲ್ಲಿ ಇನ್ನೂ ವಿಷದ ಅಂಶ ಇದ್ದುದರಿಂದ ಡಾಕ್ಟರರು ಮನೆಗೆ ಹೋಗಲು ಅಪ್ಪಣೆ ಕೊಡಲಿಲ್ಲ.

ದವಾಖಾನೆಯಲ್ಲಿ 'ದಾದಾ' ಎಲ್ಲರ ಬಾಯಲ್ಲಿ ಯೂ ಇದ್ದರು. ಐವತ್ತೈದು ವರ್ಷದ ಮುದುಕ. ಶುಭ್ರವರ್ಣದ ಪೋಷಾಕು. ಅದಕ್ಕೆ ಮೇಳವಾಗುವಂತೆ ಗೇಣುದ್ದ ಬೆಳೆದ ಬಿಳಿ ಗಡ್ಡ. ಯಾವಾಗಲೂ ನಗುವ ಮುಖ. ಆದರೆ ಜಾತಿಯಿಂದ ಶೀಖ.

ಬೇಸರ ಬಂದಾಗ್ಗೆ ' ಶೀಖ ದಾದಾ ' ಅನಂತನಲ್ಲಿ ಬರುತ್ತಿದ್ದರು. ಅನಂತನಿಗೆ ಅಧಿಕಾರಿಯ ಕರ್ತವ್ಯ ತಿಳಿಸಿ ತಮ್ಮ ಅನುಭವ ಹೇಳುತ್ತಿದ್ದರು. ಅವರ ಮಾತಿನಿಂದ ಆದೂ ಒಂದು ನೊಂದ ಜೀವ ಎಂದು ಅನಂತ ಕಲ್ಪಿಸಿದ.

ಒಂದು ದಿನ ಮುಚ್ಚಂಜೆ. ರಾಮುಸಿಂಗ ಅಭಂಗ ಅನ್ನುತ್ತಿದ್ದ. ದಾದಾ ಬಂದರು. ರಾಮುಸಿಂಗ ನಾಚಿದ. "ಶರ್ಮ ಕೆಂವು? ಈಶ್ವರಕಾ ನಾಮ ಲೆನೇಕೊ ಡರನಾ ನಹಿ" ಎಂದರು ದಾದಾ. ಅನಂತ, ದಾದಾ ರಾಮುಸಿಂಗನ ಅಭಂಗದಿಂದ ತಮ್ಮನ್ನು ತಾವೇ ಕೆಲಹೊತ್ತು ಮರೆತರು. ಸಂತರ ಸದ್‌ಭಕ್ತನಾದ ರಾಮುಸಿಂಗ ಹೊಟ್ಟೆಯ ಪಾಡಿಗಾಗಿ ಸರಕಾರೀ ವೃತ್ತಿಯನ್ನು ಕೈಕೊಂಡ ಒಬ್ಬ ಸಾಧಕ. ಕಾಯಕವೇ ಕೈಲಾಸವೆಂದು ಭಾವಿಸಿದ ಒಬ್ಬ ಶರಣ.

"ಕ್ಯಾ ದಾದಾ ವ್ಹೈ ಕಲ್ಲ ಜಾಂವೂ?" ಎಂದು ಕೇಳಿದ ಅನಂತ. "ಅಭೀ ಪಾಂಚ ದಿನ" ಎಂದರು ದಾದಾ. ಬೇರೆ ಕೆಲಸಕ್ಕೆ ದಾದಾ ಹೋದರು.

ಮರುದಿನ ಡಾಕ್ಟರರ ಅಪ್ಪಣೆ ತೆಗೆದುಕೊಂಡು ಅನಂತ ಅತ್ತಿತ್ತ ಅಡ್ಡಾಡುತ್ತ 'ಸಿ' ವಾರ್ಡಿಗೆ ಬಂದ. ರೋಗಿಗಳ ನರಳಾಟ ಚೀರಾಟ ಕೇಳಿ ಹೌಹಾರಿದ. ಒಬ್ಬೊಬ್ಬರನ್ನೆ ವಿಚಾರಿಸುತ್ತ ನಡೆದ. ಒಂದು ಕಡೆ ಇಬ್ಬರು ರೋಗಿಗಳು ವಿನೋದವಾಡುತ್ತ ಹಾಲು ಕುಡಿಯುತ್ತಿದ್ದರು. ಅನಂತ ಅಲ್ಲಿಗೇ ನಡೆದ. "ನಿಮ್ಮ ಜಾತಿ ಯಾವದು?" ಎಂದ.

ಒಬ್ಬ "ವೀರಶೈವ" ಎಂದ.

ಇನ್ನೊಬ್ಬ "ಬ್ರಾಹ್ಮಣ" ಎಂದ. ಹಾಗೇ ಮಗ್ಗುಲದಲ್ಲಿ ಮಲಗಿದ ಮತ್ತೊಬ್ಬನನ್ನೂ ಕೇಳಿದ. "ಜಾತಿ ಯಾವದು?" ಎಂದು. "ಮುಸಲ್ಮಾನ" ಎಂದ. ಅನಂತನಿಗೆ ಆಚ್ಚರಿಯಾಯಿತು.

ಇಲ್ಲಿ ಜಾತಿಭೇದವಿಲ್ಲ. ಎಲ್ಲ ಅಳಿಸಿವೆ. ಸಹೋದರತೆಯ ಸಾಮಿಪ್ಯದ ಅರಿವಿದೆ. ಒಂದೇ ಭಾವ, ಒಂದೇ ನಡೆ, ಒಂದೇ ನುಡಿ. "ಬೇನೆಯಿಂದ ಪಾರುಮಾಡು" ಎಂಬ ಒಂದೇ ಪ್ರಾರ್ಥನೆ. ಅನೇಕ ಜಾತಿಯ ಜನರಿದ್ದರೂ ಎಲ್ಲರ ಆಹಾರವೂ ಒಂದೇ; ಆಚಾರ ವಿಚಾರಗಳೂ ಒಂದೇ. ಜಾತಿಯ ವೈಷಮ್ಯ ಅಳಿಸಲು ಋಗ್ಣಾಲಯಗಳು ರಾಮಬಾಣಗಳು! ಹುಲ್ಲು ಮಾನವನ ದೇಹದಲ್ಲಿ ಶಕ್ತಿ, ಕೈಯಲ್ಲಿ ಹಣವಿದ್ದರೆ ಎಂಥ ಅಸಹ್ಯ ಅವಹೇಳನೆಯನ್ನೂ ಅನನ್ವಿತ ಅತ್ಯಾಚಾರವನ್ನೂ ಮಾಡಲು ಅಂಜುವದಿಲ್ಲ. ಆಪತ್ತು ಬಂದು

ಪರಾಧೀನನಾದರೆ ಪರಮೇಶ್ವರನನ್ನು ಮೊರೆಹೋಗುವನು. ಒಮ್ಮೆಲೇ ಅನಂತ "ದೇವಾ, ಜಾತಿ ಮತ್ಸರದಿಂದ ಸೊಕ್ಕಿದ ಜಾತ್ಯಾಂಧರೆಲ್ಲರಿಗೂ ಇಂಥ ಬೇನೆಯನ್ನು ಯಾಕೆ ನೀಡಲಾರೆ" ಎಂದು ಮನಪಲ್ಲಿ ಅಂದನು. ಸರ್ವಧರ್ಮ ಸಮ್ಮೇಳನದ ಕಾಲದಲ್ಲಿಯೇ ಒಂದು ವೈದ್ಯಕೀ ಮಂದಿರವನ್ನು ತೆಗೆಯಬೇಕೆಂಬ ವಿಚಾರವೂ ಅನಂತನಲ್ಲಿ ಸುಳಿಯಿತು.

ದಿನಗಳೆದಂತೆ ಅನಂತ, ದಾದಾರಲ್ಲಿ ಅನ್ಯೋನ್ಯ ಸ್ನೇಹ ಬೆಳೆಯಿತು. ಮನೆಗೆ ಹೋಗಲು ಅಪ್ಪಣೆ ದೊರೆತದ್ದರಿಂದ ಅನಂತ ಹಣ ಕೊಡಲು ಹೋದ. "ನಹಿ, ಮಾಫ ಕರೋ. ಮೇರಾ ಕಾಮು ಮೈನೆ ಕಿಯಾ" ಎಂದರು ದಾದಾ. ಆ ಮುದಿಹುಲಿಯ ಮಾತು ಅಚ್ಚಳಿಯದೆ ಅನಂತನಲ್ಲಿ ನಿಂತಿತು. ದಾದಾರನ್ನು ನೆನೆಸುತ್ತ ಮನೆಗೆ ನಡೆದ.

* * * *

ಮನೆಯಲ್ಲಿ ಎರಡು ಓಲೆಗಳು ಅನಂತನ ನಿರೀಕ್ಷಣೆ ಮಾಡುತ್ತ ನಿಂತಿದ್ದವು. ಸರಕಾರದ ಉಗ್ರ ಧೋರಣದಿಂದ ಸಮ್ಮೇಲನ ಆಗುವ ಲಕ್ಷಣವಿಲ್ಲೆಂದೂ, ಎಲ್ಲೆಡೆಗೆ ಜಾತೀಯ ಉದ್ವಿಗ್ನತೆ ಹಬ್ಬಿದೆಯೆಂದೂ, ಕರೀಮನ ನವಕರಿಗೆ ಮಂಗಳಾರತಿ ಆಗಿದೆಯೆಂದೂ, ತನ್ನ ಜೀವನ ಗಂಡಾಂತರದಲ್ಲಿದೆಯೆಂದೂ, ಕೆಲವೇ ದಿನಗಳಲ್ಲಿ ಉಗ್ರವಾದ ಗಲಭೆ ಆಗುವದರಿಂದ ಎಚ್ಚರಿಕೆಯಿಂದಿರಬೇಕೆಂದೂ ಭಯ್ಯಾ ಬರೆದಿದ್ದನು. 'ರಾಯರ ಪ್ರಕೃತಿ ಗಂಭೀರವಿದೆ; ಕೂಡಲೆ ಬಂದಲ್ಲಿ ರಾಯರ ಭೆಟ್ಟಿಯಾಗುವದು, ಬೇಗನೆ ಬಾ' ಎಂದು ಕೋಲಳ್ಳಿಯಿಂದ ವಿಶ್ವನಾಥಭಟ್ಟರು ಬರೆದಿದ್ದರು.

ಅನಂತನನ್ನೇ ಸೆರೆಹಿಡಿಯಲು ರಜಾಕಾರರ ನಾಟಕ ನಡೆದಿತ್ತು. ಅನಂತನ ಮೇಲೆ ಆರೋಪಗಳ ಪತ್ರವು ಸಿದ್ಧವೂ ಆಗಿತ್ತು. ಅನಂತನ ವಿಚಾರಣೆ ಮಾಡಲು ಹೈದ್ರಾಬಾದದಿಂದ ಧರ್ಮಾಂಧ ಖ್ವಾಜಾ ಸಾಹೇಬರೂ ಬರುವವರಿದ್ದರು. ರಜಾಕಾರರಿಗೆ ಅವಶ್ಯವೆನಿಸಿದಲ್ಲಿ ಎಲ್ಲ ರೀತಿಯ ಸಹಾಯ ಮಾಡಬೇಕೆಂದು ಆಲಾ ಹಜರತರ ಹುಕುಮು ಬಂದಿತ್ತು.

ನಿರಾಶ್ರಿತರಂತೆ ಹಿಂದುಗಳು ಒಬ್ಬೊಬ್ಬರೇ ಊರು ಬಿಡಹತ್ತಿದರು. ಅಸಂಖ್ಯಾತ ನಿರಪರಾಧಿಗಳು ಸೆರೆಮನೆ ಸೇರಿದರು. ಅನಂತ ತತ್ತರಿಸಿದ.

ಅವನು ನಿಸ್ಸಹಾಯಕ. ರಜೆಗಾಗಿ ಅರ್ಜಿ ಬರೆದ. ಕಾದರಿಯುವರನ್ನು ಒತ್ತಾಯದ ರಜೆಯ ಮೇಲೆ ಕಳಿಸಿದ್ದರಿಂದ ರಜೆ ನಾಮಂಜೂರ ಆಯಿತು. ತಂದೆಯನ್ನು ಕಾಣಬೇಕೆಂಬ ಕಾತರತೆಯಿಂದ ಇನ್ನೊಂದು ಅರ್ಜಿ ಬರೆದೊಗೆದು ಊರಿಗೆ ಹೊರಟೇ ಬಿಟ್ಟ. ಹಾಗೆಯೇ ಬೀದರಿಗೆ ಭಯ್ಯಾನ ಬಳಗಕ್ಕೆಲ್ಲ ಕೋಲಳ್ಳಿಗೆ ಬರಲು ಕಾಗದ ಕಳಿಸಿದ. ಮುಂದಿನ ಯಾವ ವಿಚಾರವನ್ನೂ ಮಾಡದೆ ಗಾಡಿ ಹತ್ತಿದ.

## ೧೬

ಗಾಡಿ ಹುಬ್ಬಳ್ಳಿ ಮುಟ್ಟುವ ಮೊದಲೇ "ಹೈದ್ರಾಬಾದ ಸ್ಟೇಟದಲ್ಲಿ ಹಿಂದೂ ಅಧಿಕಾರಿಗಳ ಕೈಸೆರೆ" ಎಂಬ ಸುದ್ದಿ ಕರ್ಣಕಠೋರವಾಗಿ ಅನಂತನಿಗೆ ತಾಕಿತು. ಒಮ್ಮೆಲೇ ಮಲ್ಲನ ಮೂರ್ತಿ ಮನದಲ್ಲಿ ಮಿಂಚಿತು. ಮರುಕ್ಷಣದಲ್ಲಿ ಸಂತರಾಮಸಿಂಗ ನೆನಪಾದ. ವೃದ್ಧ ಪಿತಾಮಹ ಶೀಖ ಡಾಕ್ಟರ–ಗೋವಿಂದ ದಾದಾರ ಆಕೃತಿ ಎದುರು ನಿಂತಿತು. ಮನದಲ್ಲಿ ಭತ್ತ-ಮಸಗು ಕಲಿಸಿದಂತಾಯಿತು ಅನಂತನಿಗೆ. ಭಯ್ಯಾ, ಶಮಾ, ಕರೀಮರು ಸುಖದಿಂದಿರಬಹುದೆ ? ಎಂಬ ಪ್ರಶ್ನೆಯೂ ನಿಂತಿತು.

ಭಾರವಾದ ಹೃದಯದಿಂದ ಮನೆಗೆ ಬಂದ. ಗುಣವಾಗುತ್ತಿರುವ ರಾಯರ ಪ್ರಕೃತಿ ಸ್ವಲ್ಪ ಸಮಾಧಾನ ತಂದಿತು ಅನಂತನ ನೊಂದ ಮನಕ್ಕೆ.

ದಿನವೂ ಹೈದ್ರಾಬಾದಿನ ಬಗ್ಗೆ ವಿಚಾರಿಸುತ್ತಲೇ ಇದ್ದ. ವಾಣೀವಿಹಾರದ ಕೆಲಸದಲ್ಲಿ ಮನ ತೊಡಗಿಸಬೇಕೆಂದರೂ ಮನ ಸ್ತಿಮಿತದಲ್ಲಿ ನಿಲ್ಲದಾಯಿತು.

ವೆಂಕಟರಾಯರಿಗೆ ಮುಕ್ಕಾಲು ಪಾಲು ಗುಣವಾಯಿತು. ಕಾರಣ ಅನಂತ ಊರಿಗೆ ಬಂದಿದ್ದೇ ಇರಬಹುದು.

ಒಂದು ದಿನ ತಂದೆಯೊಡನೆ ಯಾವದೊ ವಿಷಯ ಮಾತನಾಡುತ್ತ ಅನಂತ ಕುಳಿತಿದ್ದ. ಓಡುತ್ತ ಬಂದ ಭಟ್ಟರು "ಹೈದ್ರಾಬಾದಿನ ಮೇಲೆ ಭಾರತ

ಸೈನ್ಯಾಚರಣೆ" ಎಂದರು. ಆದರಿಂದ ಅನಂತನಿಗೆ ಸುಖ–ದುಃಖಗಳೆರಡೂ ಆದವು. ಆದರೂ "ದೇವರಾಟ" ಎಂದ. ಭಯ್ಯಾನಿಗೆ ಓಲೆ ಬರೆದಿದ್ದರೂ ಯಾಕೆ ಬಂದಿರಲಿಕ್ಕಿಲ್ಲವೆಂಬ ವಿಚಾರ ಎದುರು ನಿಂತಿತು. ಹಿಂದೂ ಸೈನಿಕರ ಗುಂಡಿಗೆ ಬಲಿಯಾಗಿರಲಿಕ್ಕಿಲ್ಲವಷ್ಟೆ? ಹಾಗೇ ಆರಾಂ ಕುರ್ಚಿಯಲ್ಲಿ ಕುಳಿತು ಏನೇನೋ ವಿಚಾರಿಸುತ್ತಿದ್ದ. 'ಬಾಬು' ಎಂಬ ಪರಿಚಯದ ಧನಿ ಕೇಳಿಸಿತು. ಎದ್ದು ಬಾಗಿಲ ತೆರೆದ. ಎದುರಿನಲ್ಲಿ ಶರಣಾರ್ಥಿಯಾಗಿ ನಿಂತ ಅಬಲೆ ಶಮಾ. "ಬಹೆನ ಆವೋ" ಎಂದ. "ಉಳಿದವರೆಲ್ಲಿ?" ಎಂದು ಗಾಬರಿಯಿಂದ ಅನಂತ ಕೇಳಿದ. ಶಮಾನ ನಯನ ನೀರು ತುಂಬಿದವು. ಅನಂತ ಹೌಹಾರಿದ. ಭಯ್ಯಾ ಮತ್ತು ಮಲ್ಲರ ಬಗ್ಗೆ ತನಗೆ ಏನೂ ಗೊತ್ತಿಲ್ಲವೆಂಬ ಶಮಾನ ಮಾತು ಅನಂತನನ್ನು ಹಿಂಡಿ ಹಿಪ್ಪೆ ಮಾಡಿತು.

ಅನಂತನ ಅಥಿದೇವಿಯಾಗಿ ಶಮಾ ಇರಹತ್ತಿದಳು. ಭಯ್ಯಾ, ಮಲ್ಲರ ಬಗ್ಗೆ ಸಾವಿರಾರು ಸಂಶಯಗಳು ಅನಂತ, ಶಮಾರಲ್ಲಿ ಸುಳಿಯಹತ್ತಿದವು. ಒಂದು ದಿನ ಶಮಾನ ಬಳಿ ಅನಂತ ಕುಳಿತು ಮುಂದೇನು? ಎಂದು ವಿಚಾರಿಸುತ್ತಿದ್ದ. ಭಟ್ಟರು ಬಂದವರೇ "ಅನಂತಾ, ಹೈದ್ರಾಬಾದು ಸೋತಿತು. ಭಾರತ ಗೆದ್ದಿತು" ಎಂದರು. ಅನಂತ ಮತ್ತು ಶಮಾರು ತಾವು ಗೆದ್ದೆವೆಂದರು. ಆದರೆ ಗೆಲುವು ಇನ್ನೂ ದೂರವಿತ್ತು.

ಅದೇ ಸಂಜೆಗೆ ಭಯ್ಯಾ ಬಂದ. ನಡೆದದ್ದನ್ನೆಲ್ಲ ವಿವರಿಸಿದ. ಕರೀಮ ಹಿಂದೂ ದ್ರೋಹಿಯೆಂದು ಹಿಂದೂ ಜನರೇ ಸೆರೆ ಹಿಡಿಸಿರುವರೆಂದೂ ಮೊನ್ನೆ ನಮ್ಮಲ್ಲಿ ರಾಯಚೂರಿನಿಂದ ಬಂದಿದ್ದ ಜಮಾದಾರ ರಾಮಸಿಂಗನ ಮನೆ ಹಿಂದುಗಳಿಂದಲೇ ಲೂಟಿಯಾಗಿದೆಯೆಂದೂ, ಮಲ್ಲ ಮಾತ್ರ ಗಾಯಾಳಾಗಿ ಎಲ್ಲಿಯೋ ಭೂಗತನಾಗಿರುವನೆಂದೂ ಭಯ್ಯಾ ಸಾದ್ಯಂತ ಪುರಾಣ ಹೇಳಿದ. ಮಲ್ಲನ ಸುದ್ದಿಯನ್ನು ಕೇಳಿ ಶಮಾ ಬಹಳ ನೊಂದಳು. ಅನಂತ ಕಿಡಿಕಿಡಿಯಾದ. ಕರೀಮನ ಬಿಡುಗಡೆಗಾಗಿ, ಮಲ್ಲನ ಶೋಧಕ್ಕಾಗಿ, ಅನಂತ ಆಗಲೇ ಬರೆದುಬಿಟ್ಟ.

ರಾತ್ರಿ ಹತ್ತು ಹೊಡೆದಿರಬಹುದು. ರಾಯರು ಎಲ್ಲರ ಸಂಗಡ ಯುದ್ಧದ ಕಥೆ ಕೇಳುತ್ತ ಕುಳಿತಿದ್ದರು. ಬಲಗೈಗೆ ಬ್ಯಾಂಡೇಜನ್ನು ಕಟ್ಟಿಕೊಂಡ ಶಿಪಾಯಿ

ಯೊಬ್ಬ ಒಳಗೆ ಬಂದು, ಸೆಟೆದು ನಿಂತು ಸಲಾಮು ಕೊಟ್ಟ. ಕ್ಷಣಹೊತ್ತು ಆಶ್ಚರ್ಯವಾಯಿತು. ಮರುಕ್ಷಣದಲ್ಲಿಯೇ ಆ ಶಿಪಾಯಿ ಅನಂತನ ಬಗಲು ಸೇರಿದ. ಆಗ ಮಲ್ಲನೆಂದು ಎಲ್ಲರಿಗೂ ತಿಳಿಯಿತು. ಭಯ್ಯಾ ಮಲ್ಲನ ಕೈ ಹಿಡಿದ. ಶಮಾ ಮಲ್ಲನನ್ನೆ ದಿಟ್ಟಿಸುತ್ತ ದೂರ ನಿಂತಳು.

ಮರುದಿನ ಅನಂತ ತಾನೇ ಬೀದರಿಗೆ ಹೋಗಿ ಕರೀಮನ ಬಿಡುಗಡೆ ಮಾಡಿಸಬೇಕೆಂದು ಯೋಚಿಸಿದ. ಹೊರಡುವ ಸಿದ್ಧತೆಯೂ ಮುಗಿಯಿತು. ಆದರೆ ಒಬ್ಬ ಕೆಂಪು ಬಟ್ಟೆ ಧರಿಸಿದ ಕಪ್ಪು ಸನ್ಯಾಸಿ "ರಾಮ ರಹಿಮ ಏಕ ಹೀ ಹೈ" ಎನ್ನುವ ಹಾಡು ಅನ್ನುತ್ತ ಅನಂತನ ಮನೆ ಕಡೆಗೆ ಬಂದ. ಬಂದವನೇ ಅನಂತನ ಮನೆ ಹೊಕ್ಕ. ಎಲ್ಲರೂ ಆಶ್ಚರ್ಯಚಕಿತರಾದರು. ಶಮಾ ಮಾತ್ರ "ಕರೀಮ ಭಯ್ಯಾ" ಅಂದಳು. ಅವರೆಲ್ಲರ ಆನಂದ ಹದ್ದು ಮೀರಿತು.

ಭಟ್ಟರು ಓಲೆ ಬರೆದದ್ದರಿಂದ ಸರೋಜಳೂ ಬಂದಳು. ಸಂತೋಷ ಕಾಸಾರದಲ್ಲಿ ಸರೋಜಳು ಸರೋಜಳೇ ಆದಳು. ಅನಂತ ಅದರ ದಿನಮಣಿ. ಎಲ್ಲ ಹೊಸ ಬಳಗ ನೋಡಿ ಸರೋಜ ಮನತುಂಬ ಸಂತಸಗೊಂಡಳು.

ಕೋಲಳ್ಳಿ ತುಂಬೆಲ್ಲ ಅನಂತನದೇ ಬಳಗ. ವಾಣೀವಿಹಾರದಲ್ಲಿ ದಿನ ವೊಂದಕ್ಕೆ ಬೇರೆ ಬೇರೆ ಕಾರ್ಯಕ್ರಮಗಳು ನಡೆಯಹತ್ತಿದವು. ಹೊಸ ಕಟ್ಟಡ ಅರ್ಧಕ್ಕೆ ನಿಂತದ್ದರಿಂದ ಹಣಕೂಡಿಸುವ ವಿಚಾರ ನಡೆಯಿತು. ಭಟ್ಟರು 'ಈ ಕೆಲಸ ನನಗೆ ಬಿಡ್ರಿ. ಇನ್ನೊಮ್ಮೆ ಇಲ್ಲಿ ಬರುವ ಮೊದಲು ನಾ ಕಟ್ಟಡಾ ಕಟ್ಟಿಸದಿದ್ದರ ಮಾತಾಡ್ರಿ. ಬ್ಯಾರೆ ಅಕ್ಲ ಹಾಕೀನಿ, ನಿಮ್ಮ ಸಮ್ಮೇಲನದ್ದು ಇಷ್ಟು ನೀವು ಮಾಡ್ರಿ" ಅಂದರು. ಭಟ್ಟರ ಕಾರ್ಯದ್ಯೋತಕಕ್ಕೆ ಎಲ್ಲರೂ ಅಚ್ಚರಿಗೊಂಡರು.

'ಸರ್ವಧರ್ಮ ಸಮ್ಮೇಲನವನ್ನೂ', 'ಶಾಂತಿ ಪರಿಷತ್ತನ್ನೂ' ಬೀದರಿ ನಲ್ಲಿಯೇ ಕರೆಯಬೇಕೆಂದು ತೀರ್ಮಾನವಾಯಿತು. ಅದರ ಬಗ್ಗೆ ಯೋಜನೆ ಸಿದ್ಧಪಡಿಸಲು ಚಿಕ್ಕ ಆಯೋಗ ಸಮಿತಿಯನ್ನೂ ನಿಯಮಿಸಿದರು.

ಮುಂದಿನ ಕೆಲಸ ಮಾಡಲು ಭಯ್ಯಾ ತನ್ನ ಬಳಗದೊಂದಿಗೆ ಬೀದರಿಗೆ ಹೋದ. ಪರಿಚಿತರ ಆಗ್ರುಹಕ್ಕಾಗಿ ಮಲ್ಲ ನಿಂತ.

ಮುಂದೆ ನಾಲ್ಕಾರು ದಿನಗಳಲ್ಲಿ ಅನಂತನಿಗೆ ಕರೆ ಬಂದುದರಿಂದ ಅವನೂ ರಾಯಚೂರಿಗೆ ಹೋಗುವ ಸಿದ್ಧತೆ ನಡೆಸಿದ. ಅನಂತನಿಗೆ ಯಾಕೊ ಕೆಡುಕ

ನಿಸಿತು. ತಾಯಿಯೂರನ್ನು ಬಿಡಲು ಮನ ಒಪ್ಪದಾಯಿತು. " ತಿರುಗಿ ಇಲ್ಲಿಗೆ ಬರಬಹುದೆ ? " ಎಂಬ ಸಂಶಯ ಮೂಡಿತು. ಶಕುನಗಳು ಅನಿಷ್ಟ ಸೂಚಿಸಿದವು. ಜನರ ತಂಡ " ಮಾಸ್ತರ, ನಮ್ಮನ್ನ ಮರತಗಿರತೀರಿ; ವರಸಕ್ಕ ಯಾಲ್ಡ ಬ್ಯಾರೆ ಬರಾಕಬೇಕು " ಎಂದಿತು. " ಬರೋದು ನನ್ನ ಕೈಯಾಗ ಏನ ಅದs, ಎಲ್ಲಾ ದೇವರ ಕೈಯಾಗ ಐತಿ. ಅಂತೂ ಇನ್ನ ಬರೋದು ಸ್ವಲ್ಪ ತಡಾನಃ " ಎಂದ. ಅನಂತನಿಗೆ ಆದ ದುಃಖ ಅವನಿಗೂ ತಿಳಿಯಲಿಲ್ಲ. '' ಬರತೀನಿ " ಎಂದು ಕೋಲಳ್ಳಿಗೂ ಅದರ ಜನಕ್ಕೂ ಕೈ ಮುಗಿದ. ಜನತೆಗೆ ದುಃಖವಾಯಿತು. ಆದರೆ ವೇಳೆ ಎಲ್ಲವನ್ನೂ ಸರಿಪಡಿಸಿತು. ಅನಂತ ಕೋಲಳ್ಳಿ ಬಿಟ್ಟ. ಕೊನೆಯ ವರೆಗೂ ಬಿಟ್ಟ. ಅದೇ ಗಾಡಿಯಿಂದ ಸರೋಜಳೂ ಹೊರಟಳು ಧಾರವಾಡಕ್ಕೆ.

## ೧೭

ಅನಂತ ಪುನಃ ಅಧಿಕಾರಾರೂಢನಾದ. ನಡೆದಿದ್ದ ವಿಶ್ವಮೇಧ ಅವನಲ್ಲಿ ಅಶಾಂತತೆ ಹುಟ್ಟಿಸಿತು. ಕೋಲಾಹಲ ನಡೆದಿದ್ದರ ಛಾಯೆ ಇನ್ನೂ ಕಾಣುತ್ತಿತ್ತು. ಅವನಿಗೆ ಗತಿಸಿದ ಸಂಗತಿಗಳು ನೆನಪಾದಾಗ ವಿಚಿತ್ರವೆನಿಸಹತ್ತಿತು. ಸಮಾಜಗಳನ್ನಾವರಿಸಿದ ಅಶಾಂತತೆಯನ್ನು ಅಳಿಸುವ ಚಿಂತಾಮಣಿ ಯಾವದೆಂದು ಶೋಧಿಸುವಲ್ಲಿಯೇ ದಿನಗಳೆಲ್ಲ ಉರುಳಹತ್ತಿದವು.

ಹೊಸ ವಾತಾವರಣ, ಹೊಸ ಸರಕಾರ. ಎಲ್ಲವೂ ಹೊಸದಾಗಿ ನಡೆಯಹತ್ತಿತು. ಇಮ್ಮಡಿ ಹುರುಪಿನಿಂದ ಕಾರ್ಯ ನಡೆಸಲೇ ಬೇಕಾಯಿತು. ಅಂದು ಮುಸಲ್ಮಾನರು ಅನಂತನ ವೈರಿಗಳಾಗಿದ್ದರೆ ಇಂದು ಹಿಂದುಗಳಾದರು. ಆದರೆ ಸಭ್ಯ, ಸಜ್ಜನ, ಶೀಲವಂತರಿಗೆ ಅನಂತ ಅಮರ ಮಂದಾರ.

ಮಲ್ಲ, ಕರೀಮರಿಗೆ ಮೊದಲಿನ ನವಕರಿ ಸಿಕ್ಕಿದೆಯೆಂಬ ಶವಾಸ ಪತ್ರ ಅನಂತನಿಗೆ ಸಮಾಧಾನ ನೀಡಿತು.

ದಿನ ದಿನಕ್ಕೆ ಅನಂತನಿಗೆ ಆಫೀಸಿನಲ್ಲಿ ಕೆಲಸ ಹೆಚ್ಚುತ್ತ ನಡೆಯಿತು. ದೇಹಿ ಎಂದು ಬಂದವರಿಗೆಲ್ಲ ಸಹಾಯ ನೀಡಹತ್ತಿದ. ನವಕರಿ ಕಳಕೊಂಡ ಬಡ ಮುಸಲ್ಮಾನರಿಗೂ ಹೆಚ್ಚಿನ ಸಹಾಯಕ್ಕಾಗಿ ಶಿಫಾರಸು ಮಾಡಹತ್ತಿದ. ಆಪತ್‌ಬಾಂಧವರ ಅಂಗರಕ್ಷಕನಾದ.

ಆದರೆ ತನ್ನ ಆಫೀಸ ಕೆಲಸದಲ್ಲಿ ಯಾರ ಮೇಲೆಯೂ ವಿಶ್ವಾಸವಿಡಲಿಲ್ಲ. ಮೊದಲಿನ ಕಾರ್ಯಕವನ್ನು ಆರಂಭಿಸಿದ. ಸಂಶಯಸ್ಥ ಪ್ರತಿಯೊಬ್ಬ ಹಿಂದೂ–ಮುಸಲ್ಮಾನರ ಮನೆ, ಮಠ, ಮಸೀದೆಗಳನ್ನು ಶೋಧಿಸಿ ಝಡತಿಯ ಸತ್ರ ಆರಂಭಿಸಿದ.

ರಜಾಕಾರರಿಗೆ ಸಹಾಯ ನೀಡಿದರೆಂಬ ನೆವದಿಂದ ಕೆಲ ಸ್ವಾರ್ಥಿ ಹಿಂದೂ ಮುಖಂಡರು ಹಿಂದುಗಳ ಮೇಲೆಯೇ ಅತ್ಯಾಚಾರ ನಡೆಸಿದರು. ನಿರಪರಾಧಿಗಳಿದ್ದರೂ ಮುಸಲ್ಮಾನ ಜಾತಿಯಲ್ಲಿ ಹುಟ್ಟಿದ ಒಂದೇ ತಪ್ಪಿಗಾಗಿ ನೂರಾರು ಮುಸಲ್ಮಾನ ಕುಟುಂಬಗಳು ಹಿಂದೂ ಸಮಾಜಸೇವಕರ ಸೈತಾನೀತನಕ್ಕೆ ಬಲಿಯಾಗಹತ್ತಿದವು. ಈ ಸಂಕ್ರಾಂತಿ ಕಾಲದಲ್ಲಿ ಬಲವಿದ್ದವನೇ ಬಾಳುವವನಾದ. ಅನಂತನಿಗೆ ಇವೆಲ್ಲವುಗಳ ಸುದ್ದಿ ತಾಕದಿರಲಿಲ್ಲ. ಅವನ ದೇಹದ ಪ್ರತಿಯೊಂದು ರೋಮವೂ ನಿಮಿರೆದ್ದಿತು. ಅನ್ಯಾಯ ಮಾಡುವವರೆಲ್ಲ ಸೈತಾನರು. ಸಮಾಜಕಂಟಕ ಶಕ್ತಿಗಳನ್ನೆಲ್ಲ ಸದೆಬಡೆಯಲು ವೀರ ಶಪಥವನ್ನೇ ಕೈಕೊಂಡ ಅನಂತ.

ಒಂದು ಮಧ್ಯಾಹ್ನ ಮೂರು ಘಂಟೆ. ಒಬ್ಬ ಸಿರಿವಂತ ಹಿಂದೂ ಕಾರ್ಯ ಕರ್ತನ ಮನೆಯಲ್ಲಿ ಗುಪ್ತ ಸಭೆ ನಡೆದಿದೆ. ಅನಂತನಿಗೆ ಸುಳುವು ಹತ್ತಿದ್ದರಿಂದ ಕೈಕೆಳಗಿನ ನಾಲ್ಕಾರು ಜನರೊಡನೆ ಅಲ್ಲಿಗೆ ಹೋದ. ಜೀವದ ಪರಿವೆ ಇಲ್ಲದಲೇ ಅನಂತ ಒಳಗೇ ನುಗ್ಗಿದ.

" ಯಾಕ " ಎಂದರು ಸಾವಕಾರರು.

" ತಮ್ಮಲ್ಲಿಂದ ಕೆಲವು ಮಾಹಿತಿ ಬೇಕಾಗಿವೆ; ತಮ್ಮಲ್ಲಿ ಕೆಲವು ಕಾಗದ ಪತ್ರ ಇವೆಯಂತೆ " ಎಂದ ಅನಂತ.

" ಸದ್ಯ ಇಲ್ಲ; ಈಗ ಕೆಲಸ ಅದ. "

" ಸರಕಾರಕ್ಕೇ ತೀರ ಅವಶ್ಯ ಅದ. "

" ಯಾವ ಸರಕಾರ ಅದು? ನಾನೆಲ್ಲಾ ಕಳಸತೀನಿ. ನನ್ನ ಹೆಸರು ಹೇಳು ನಿಮ್ಮ ಸಾಹೇಬಗ. "

" ತಾವು ಕಚೇರಿಗೆ ಬರ್ರಿ; ಅಲ್ಲೇ ಎಲ್ಲಾ ಹೇಳಿ ಬರ್ರಿ. "

" ಹೂಂ ನಡಿ, ನಿಮ್ಮ ಸಾಹೇಬಗಃ ಬಾ ಅನ್ನು. ನಾ ಬರಲ್ಯಾ ಕಚೇರಿಗೆ ? "

" ನಿಮ್ಮ ಮೇಲೆ ಪೋಲೀಸ ವಾರಂಟ ಇದೆ. "

" ಯಾರ ಜೋಡಿ ಮಾತಾಡತೀದಿ, ಗೊತ್ತ ಅದನೊ ಇಲ್ಲೊ ? "

" ನನಗೆಲ್ಲಾ ಗೊತ್ತದ, ಅದಕ್ಕಃ ಬಂದಿದ್ದು. ಹೂಂ ಏಳ್ರಿ, ಸಾಧ್ಯವಿಲ್ಲ. ಹೂಂ ಬರಲಿಕ್ಕೇ ಬೇಕು. "

" ಯಾಕ ಮುಸಲ್ಮಾನರು ಏನರಃ ಲಂಚಾ ಕೊಟ್ಟಾರೇನು ? "

" ಹೌದು ಹೌದು ಸಾವಕಾರ, ಇವರ ಬೀದರ ಕಥಿ ಮೊನ್ನೆ ಕೇಳಿದೆವೆಲ್ಲ. ಮುಸಲ್ಮಾನರ ಹೆಣ್ಣುಮಕ್ಕಳಂದ್ರ ಈ ಪೋಲೀಸ ಇನಸ್ಪೆಕ್ಟರಗ ಜೀವ ಅಂತ" ಎಂದರು ಸಾವಕಾರರ ಗೆಳೆಯರು.

" ನಾ ಬರೂದಿಲ್ಲ, ನೀ ಬೇಕಾದ್ದ ಮಾಡು. ನಿನ್ನೆ ಬಂದೀನಿ ಹೈದ್ರಾಬಾದದಿಂದ, ಎಲ್ಲಾರನೂ ಭೆಟ್ಟಿಯಾಗಿ ಬಂದೀನಿ. ತಡಿ, ಇನ್ನೆರಡ ದಿನದಾಗ ನೋಡ ನಿನ್ನ ಅವಸ್ಥಿ, ನನ್ನ ಮ್ಯಾಲ ವಾರಂಟ ತಂದಾನಂತ ವಾರಂಟ. ನಡಿ ಹೊರಗ, ಏ ಚೆನ್ಯಾ, ರಾಮ್ಯಾ ಕಟ್ಟಿ ಒಗಿರ್ಯೊ ಇವನ್ನ ಒಳಗ" ಎಂದರು ಸಾವಕಾರರು.

" ಖಬರದಾರ, ನಾನಃ ಇಲ್ಲಿ ಸಾಹೇಬ. ಯಾರಂತ ತಿಳಿದಿ ನನ್ನ? ಕೈ ಮ್ಯಾಲೆತ್ತಿದಿ ಅಂದ್ರ, ಆತು ನೋಡು, ಇಲ್ಲೆ ಪಿಸ್ತೂಲ. ಕಾರ್ಯಕರ್ತರ ಸೋಗಿನ್ಯಾಗ ಇದನ್ನ ನಡಸೀರೇನು ? ಹೂಂ ಏಳ ಕಚೇರಿಗೆ. ಬದ್ಮಾಷ್! ನನ್ನ ಮನೆಗೆ ಕಳಸತೀಯಾ? ನಿನ್ನ ಯಾರ ಬಿಡಸೋರ ಬರ್ಲಿ, ಹೂಂ ನಡೆ" ಅಂದ.

ಎಲ್ಲರ ಮುಖಗಳ ಮೇಲೆ ವಿಚಿತ್ರ ಕಳೆ ಒಮ್ಮೆಲೇ ಮೂಡಿತು; ಗಾಬರಿಯಾದರು; ಅಂಜಿಕೆ ಹುಟ್ಟಿತು. ಆದರೂ ಸಾವಕಾರರು ಧೈರ್ಯದಿಂದ " ಹೋಗೋ ಹೋಗು, ನಿನ್ನಂಥವರು ಎಷ್ಟೋ ಮಂದಿ " ಅಂದರು. "ಹೂಂ ಹಾಂಗೇನು ? ನಾ ಮಂದಿ ಹಾಂಗ ಅಲ್ಲ; ಬರತೀರೊ ಇಲ್ಲೊ" ಅನ್ನುತ್ತ

ಸೀಟಿ ಊದಿದ. ಹೊರಗಿನಿಂದ ಬಂದ ಶಿಪಾಯಿಗಳ ಬೇಡಿಗಳು ಸಾವ ಕಾರರನ್ನೂ ಅವರ ಬಳಗವನ್ನೂ ಅಲಂಕರಿಸಿದವು. ಹೇರಳವಾದ ಮದ್ದು ಗುಂಡುಗಳ ಅನಧಿಕೃತ ಸಂಗ್ರಹವು ಸಾವಕಾರರನ್ನು ಸೆರೆಮನೆಗೆ ಕಳಿಸಿತು.

ಅನಂತನಿಗೆ ಕಾರ್ಯಕರ್ತರಲ್ಲಿಯ ವಿಶ್ವಾಸವೇ ಹಾರಿಹೋಯಿತು. ಕಾರ್ಯಕರ್ತರೆಂಬ ನೆವದಿಂದ ಆಫೀಸಿನಲ್ಲಿ ಬರುತ್ತಿದ್ದವರಿಗೆಲ್ಲ ಅಪ್ಪಣೆ ಇಲ್ಲದೆ ಒಳಗೆ ಬರದಂತೆ ಮಾಡಿದ. ಸಮಾಜಸೇವಕರ ಮೇಲೆ ಕಣ್ಣಿಡಲು ಕೈಕೆಳಗಿನ ವರಿಗೆಲ್ಲ ಕಿವಿ ಮಾತು ಕೊಟ್ಟ.

ಮತ್ತೊಂದು ದಿನ ಮಸೀದೆ ಝಡತಿ ನಡೆಸಿದಾಗ ಹೂಳಿದ ಎರಡು ಹೆಣ ದೊರೆತವು. ಅಪರಾಧಿಗಳು ಹಣ ಕೊಡಬಂದರು. ಅನಂತನ ಕೈಕೋಲು ಉತ್ತರ ಹೇಳಿತು. ಅನಿವಾರ್ಯವಾಗಿ ಅವರು ಸೆರೆಮನೆ ಸೇರಿದರು.

ಆ ಮೇಲೆ ಅನಂತ ದೀನ ದರಿದ್ರರ ಮನೆಗೆ ಹೋಗಿ ನಿರಪರಾಧಿ ಹಿಂದು--ಮುಸಲ್ಮಾನರಿಗೆ ಅಭಯ ಕೊಡಹತ್ತಿದ. ಅನಂತನ ಜಾತ್ಯತೀತ ತೆಯ ಕೀರ್ತಿಕಳಸ ಮುಗಿಲುದ್ದ ಎದ್ದು ನಿಂತಿತು. ದಿಕ್ಕಿಲ್ಲದವರಿಗೆ ಅನಂತನ ಹೆಸರು ತಾರಕವಾಯಿತು. ಬಡವರಿಗೆ ಅನಂತ ಸಹಾಯಕನೂ ಆದ

ಅನಂತ ಬೇಜಾರ ಬಂದಾಗೆಲ್ಲ ಪೋಲೀಸ ಅಮೀನ ಕಾಶೀಮನ ಮನೆ ಯಲ್ಲಿ ಊಟ ಮಾಡಹತ್ತಿದ. ಅನಂತನ ವಿರೋಧಿಗಳಿಗೆ ಇದೊಂದು ನೆವ ವಾಯಿತು. ಅನಂತ, ಕಾಶೀಮರು ಮಾತಾಡುತ್ತ ನಿಂತಿರುವ ಫೋಟೋ ತೆಗೆದು, ಸಾಕಷ್ಟು ಸುಳ್ಳು ಪುರಾವೆ ಹುಟ್ಟಿಸಿ, ಅನಂತನ ಬಗ್ಗೆ ಅನೇಕ ದೋಷಾ ರೋಪಣೆ ಮಾಡಿ ಮೇಲೆ ಬರೆದು ಕಳಿಸಿದರು.

ಮುಂದೆ ಎಂಟು ದಿನಗಳಲ್ಲಿಯೇ ಅನಂತನ ಆಫೀಸಿಯಲ್ ಇನಕ್ವಾಯರಿ ಇದೆಯೆಂಬ ಸುದ್ದಿ ಊರ ತುಂಬ ಹಬ್ಬಿತು. ಅನಂತ ಮಾತ್ರ ತನ್ನನ್ನೇ ತಾನು ಶಪಿಸಿಕೊಂಡ. ಇಂಥ ಜನ, ಜನರ ಮಾತಿನಂತೆ ನಡೆಯುವ ಸರ ಕಾರ ಇವುಗಳಿಂದ ಬೇಸತ್ತ ಅನಂತ ರಾಜೀನಾಮೆ ಕೊಡಲು ಇಚ್ಛಿಸಿದ. ಆದರೆ ಇನಕ್ವಾಯರಿ ಮುಗಿಯದೇ ರಾಜೀನಾಮೆ ಮಂಜೂರಿ ಆಗುವ ಹಾಗಿಲ್ಲ. ಅನಂತನೂ ತುಸು ಗಾಬರಿಯಾದ. "ಇದರಲ್ಲಿ ಡಿ. ಎಸ್. ಪಿ.ಗೆ ಶಿಕ್ಷಾ ಆಗೇ ತೀರತದ" ಎಂದು ಜನರು ಮಾತನಾಡಹತ್ತಿದರು. ಅನಂತ ಸರಕಾರದ

ದೃಷ್ಟಿಯಲ್ಲಿ ಅಪರಾಧಿಯಾದ. "ಸಸ್ಪೆಂಡ ಆದನಂತಲ್ರಿ ನಿಮ್ಮ ಸಾಹೇಬ" ಎಂಬ ಜನರ ಮಾತು ಕೇಳಿ ಶೀಖ ದಾದಾ ನೊಂದರು. "ಒಳ್ಳೆಯವ ಇಂದು ಬಾಳಲು ಅನರ್ಹ" ಅಂದರು ದಾದಾ. ಅನಂತನ ಭೆಟ್ಟಿಗೆ ದಾದಾನೇ ಬಂದರು. "ಸಸ್ಪೆಂಡ ಸುಳ್ಳು. ಆದರೆ ಪರಿಸ್ಥಿತಿ ಗಂಭೀರ ಅದ ದಾದಾ. ಯಾಕಂದ್ರ ಹಿಂದೂ–ಮುಸಲ್ಮಾನರು ಇಬ್ಬರೂ ನನ್ನ ವಿರುದ್ಧ ಇದ್ವಾರ. ಈ ಪ್ರಕರಣ ಮುಗೀತಂದ್ರ ನಾ ರಾಜೀನಾಮೆನಃ ಕೊಡತೀನಿ" ಅಂದ. ದಾದಾ ಗಾಬರಿ ಆಗದಿರಲು ಹೇಳಿ ಹೋದರು.

ಒಂಬತ್ತನೇ ತಾರೀಖಿಗೆ ವಿಚಾರಣೆ ನಡೆಯಿತು. ವಿಚಾರಣೆ ನಡೆಸಲು ಬಂದ ಅಧಿಕಾರಿಗಳಲ್ಲಿ ಒಬ್ಬರು ಮಹಮ್ಮದ ಕಾದರಿ, ಇನ್ನೊಬ್ಬರೆಂದರೆ ಪುಣೆ ಯಿಂದ ಹೈದ್ರಾಬಾದಿಗೆ ಹೊಸದಾಗಿ ಬಂದ ಸಿವಿಲ ಅಧಿಕಾರಿ ಜಳಗಾಂವಕರ, ಮತ್ತೊಬ್ಬರೆಂದರೆ ಅದೇ ಸ್ಟೇಟಿನ ಉಚ ಪೋಲೀಸ ಹಿಂದೂ ಅಧಿಕಾರಿ. ಮೂರ್ತಿತ್ರಯದಿಂದ ಕೂಡಿದ ನ್ಯಾಯಸಭೆ ಅನಂತನ ವಿಚಾರಣೆ ನಡೆಸಿತು. ಕಾದರಿಯವರ ಬಲ ಅನಂತನಿಗೆ ಧೈರ್ಯ ಹೇಳಿತು.

"ಕ್ಯಾ ಗವರ್ನಮೆಂಟ ಆಫೀಸರ ಐಸಾ ಕರನಾ ಕ್ಯಾ?" ಎಂದು ಕಾದರಿಯವರೇ ಅನಂತನನ್ನು ಕಾಡಿಸಹತ್ತಿದರು. ತನ್ನನ್ನು ಈ ಸ್ಥಿತಿಗೆ ತಂದ ಕಾದರಿಯವರು ಯಾಕೆ ಬದಲಾಗಿರಬಹುದು. ಎಂದು ಅನಂತ ವಿಚಾರಿ ಸಹತ್ತಿದ. ಉಳಿದ ಇಬ್ಬರು ಅನಂತನ ಮೇಲೆ ದಯೆ ತೋರಿಸಿ ಮಾತಾ ಡಿದರೆ ಕಾದರಿಯವರು ಅಧಿಕಾರ ದರ್ಪದಿಂದ ಮಾತಾಡಹತ್ತಿದರು. ನೀರಲ್ಲಿ ಬಿದ್ದಾಗ ಈಜುವ ಕಾಯಿಯೆ ಒಡೆದರೆ? "ಆಪ ಬಹುತ ಕಸೂರ ಕಿಯೆ ಹೈ ದೇಖೇಂಗೆ, ಓ ಸಬ ಲೋಗೋಂಕೊ ಬುಲಾತೆ ಹೈ, ಕ್ಯಾ ಬೋಲತೆ ಹೈ ಸುನೊ" ಎಂದು ಕಾದರಿಯವರೆಂದಾಗ ಅನಂತನ ಜೀವ ಮುದುಡಿತು. ರಾಯಚೂರ ಜಿಲ್ಹೆಯ ಹತ್ತು ವರುಷದ ಫೈಲುಗಳನ್ನೆಲ್ಲ ಕಾದರಿಯವರು ತಂದಿದ್ದರು. ಮೊದಲು ರಾಯಚೂರಿನಲ್ಲಿಯೇ ಕೆಲಸ ಮಾಡಿದ್ದರಿಂದ ತಾವು ಮಾಡಿದ್ದ ರಿಪೋರ್ಟುಗಳನ್ನೂ ತಂದಿದ್ದರು. ಒಬ್ಬೊಬ್ಬರೇ ಸಾಕ್ಷಿದಾರರು ಬರಹತ್ತಿದರು.

"ನಿನ್ನ ಹೆಸರೇನು?" ಕಾದರಿ ಕೇಳಿದರು.

"ಗೌಸಮುಹಮ್ಮದ."

"ದೇವರ ಆಣ್ಯಾಗ್ಯೂ ಹೇಳತೀದ್ಯಾ."

"ಜೀ."

"ಸಾಹೇಬರು ಏನು ಮಾಡ್ಯಾರ ನಿನಗ ?"

"ಹೋದ ತಿಂಗಳ ೧೦ನೇ ತಾರೀಖಿಗೆ ನಮ್ಮ ಮನೆಗೆ ಬಂದು ಲಂಚಾ ಕೇಳಿದರ್ರಿ; ನಾ ಇಲ್ಲ ಅಂದಿನ್ರಿ; ನನ್ನ ಹೊಡದರ್ರಿ."

ಕಾದರಿಯವರು ನ್ಯಾಯಮಂಡಳದ ಇನ್ನಿಬ್ಬರಿಗೆ ಅಂದು ೧೦ನೇ ತಾರೀಖು ಅನಂತ ಹೈದ್ರಾಬಾದ ಮೀಟಿಂಗಿನಲ್ಲಿದ್ದ ಡಾಯರಿ ತೋರಿಸಿದರು. ಮತ್ತು ಮಹಮ್ಮದ ಗೌಸನ ಹಿಂದಿನ ಇತಿಹಾಸದ ರಿಕಾರ್ಡ ಮುಂದಿಟ್ಟರು. ರಜಾಕಾರರ ಸ್ವಯಂಸೇವಕನಾಗಿದ್ದಾಗ ಅವನ ಮೇಲಿದ್ದ ಚ್ಯಾಪ್ಟರ ಕೇಸು ನೋಡಿ ಉಳಿದ ಇಬ್ಬರು ಸದಸ್ಯರು, "ನಿನಗ ಶಿಕ್ಷಾ ಆಗತದಃ ಸುಳ್ಳ ಹೇಳಿದ್ದಕ್ಕ" ಅಂದು ಅವನನ್ನು ಕಳಿಸಿದರು.

ಎರಡನೇ ಸಾಕ್ಷಿ ಹುಸೇನನದಿತ್ತು. "ಸಾಹೇಬರ, ನನಗ ನಾಕ ಮಂದಿ ಬಂದು ಇಪ್ಪತ್ತು ರೂಪಾಯಿ ಕೊಟ್ಟು ಸಾಕ್ಷಿ ಹೇಳ ಅಂದರ್ರಿ ಬಂದಿನ್ರಿ. ನಮ್ಮ ಸಾಹೇಬರು ಅಂದ್ರ ದೇವರ ಇದ್ದಾಂಗ ಇದ್ದಾರ್ರಿ" ಅಂದ.

ಮೂರನೇ ಸಾಕ್ಷಿ ಮಹದೇವಗೌಡರದು. "ಆಣೆ ಮಾಡಿ ಹೇಳತೀನ್ರಿ; ಈ ನಮ್ಮ ಸಾಹೇಬರು ನಮ್ಮ ಗೌಡ್ರ ಜಾತಿ ಮಾನ ಕಳದಾರ್ರಿ. ಜನರನ್ನ ಹುರಿದುಂಬಿಸಿ, ತುಡಗ ಮಾಡಸತಾರ್ರಿ; ರಜಕಾರರ ಕೈಲೆ ಲಂಚಾ ತಿಂದು ಅವರನ್ನ ಬಿಟ್ಟಾರ್ರಿ." ಅಂದ.

ಕಾದರಿಯವರು "ಆಣೆ ಮಾಡತೀದ್ಯಾ ?" ಅಂದರು.

ಗೌಡನು "ಹೂಂ" ಅಂದನು.

"ಎಲ್ಲಿ ಕಳವು ಮಾಡಿಸ್ಯಾರ ನಿಮ್ಮ ಸಾಹೇಬರು ?"

"ಊರ ಗೊತ್ತಿಲ್ರಿ."

"ನಿಮ್ಮ ಮರ್ಯಾದಿ ಹ್ಯಾಂಗ ಕಳದ್ರು ?"

"ನಮಗ ಹಗಲೆಲ್ಲ ಕಚೇರಿಗೆ ಕರಿಸಿ ಬಯತಿದ್ದರ್ರಿ."

ಕಾದರಿಯವರು, "ಗೌಡರ, ನೀವು ಖೂನಿ ಮಾಡಿಸಿದ್ದಕ್ಕ ನಿಮಗ

ಶೀಕ್ಷಾ ಆಗಿತ್ತಿಲ್ಲೋ? ನಿಮ್ಮ ಮ್ಯಾಲೆ ಕಳವಿನ ಆರೋಪ ಬಂದು, ನಿಮ್ಮ ಗೌಡಕಿ ಹೋಗಿತ್ತಿಲ್ಲೋ?" ಎಂದು ಕೇಳಿದರು.

ಗೌಡರು ಮುಖ ಕೆಳಗೆ ಮಾಡಿದರು. ಅನಂತನು ನವಕರಿ ಸೇರಿ ದಂದಿನಿಂದ ಇಲ್ಲಿಯ ವಗೆರೆ ಮಾಡಿದ ಕೆಲಸದ ರಿಪೋರ್ಟನ್ನೂ ರಾಯಚೂರ ಜಿಲ್ಹೆಯಲ್ಲಿಯ ಜನತೆಯ ವಿಚಾರ ಪರಂಪರೆಯನ್ನೂ ಕಾದರಿಯವರು ಕಮಿಟಿಯ ಮುಂದೆ ಇಟ್ಟರು. ನ್ಯಾಯಪತಿಗಳು ಅನಂತನ ಅದ್ವಿತೀಯ ಸಾಹಸಕ್ಕೆ ತಲೆಬಾಗಿ ಅವನು ಪೂರ್ಣ ನಿರ್ದೋಷಿಯೆಂದೂ, ಅವನ ಕಾರ್ಯಕ್ಕೆ ಅವನಿಗೆ ಬಹುಮಾನ ಅವಶ್ಯವೆಂದೂ, ಸಾಕ್ಷಿದಾರರಿಗೆ ದಂಡನೆ ಯೋಗ್ಯವೆಂದೂ ಬರೆದರು.

ಕುಚೋದ್ಯ ಜನರ ಹೊರತಾಗಿ ಊರಿಗೆಲ್ಲ ಅದು ಆನಂದದ ಸುದ್ದಿ.

ರಾತ್ರಿ ಕಾದರಿಯವರು ಬಂದು, "ನಿನ್ನ ಕೆಲಸ ನೀನು ಮಾಡು, ನಾನು ಇದ್ದೇನೆ. ನನಗೆ ಮೊದಲೇ ತಿಳಿದಿತ್ತು" ಎಂದು ಹೇಳಿ ಹೋದರು.

ಅನಂತನಿಗೆ ಸಾವಿರ ಕೈಗಳಾದವು; ಆನಂದ ಚರಮಸೀಮೆ ಮುಟ್ಟಿತು; ಅಪರಾಧಿಗಳ ಉಚ್ಚಾಟನೆಗೆ ಅಧಿಕ ಬಲ ಬಂದಿತು.

ಜಿಲ್ಹೆಯ ತುಂಬೆಲ್ಲ ಅನಂತಸಾಹೇಬನ ಹೆಸರು ಮನೆಮಾತಾಯಿತು. ಹಳ್ಳಿಯ ರೈತರಿಗೆ ಸ್ವತಃ ಹೋಗಿ ಭೆಟ್ಟಿ ಕೊಟ್ಟು ದೂರು ಕೇಳಹತ್ತಿದ. ಕೊಲೆ–ಸುಲಿಗೆಗಳು ಅಡಗಿದವು. ಅನಂತನೆಂದರೆ ಅನಾಥರಿಗೆ ಆರಾಧ್ಯ ದೇವತೆ.

* * * *

ಆ ಭಾಗದಲ್ಲಿಯೇ ಪ್ರಸಿದ್ಧವಾದ ಹುಲಿಗೆಯ ಜಾತ್ರೆ ಬಂದಿತು. ಅನಂತನ ಕ್ಯಾಂಪು ಅಲ್ಲಿಗೆ ಹೊರಟಿತು ಜಾತ್ರೆಯಲ್ಲಿ ಶಾಂತಿ, ಸುವ್ಯವಸ್ಥೆ ಕಾಯುವದಲ್ಲದೆ, ಮೂಢ ಭಾವನೆಯಿಂದ ನಡೆಯುವ ಪಶುವಧೆ ನಿಲ್ಲಿಸಬೇಕೆಂದೇ ಅನಂತ ಬಂದದ್ದು.

ದೇವಿಯ ಪವಾಡಗಳ ಬಗ್ಗೆ ಮೊದಲೇ ಕೇಳಿದ್ದರಿಂದ ಅನಂತನಲ್ಲಿ ವಿಶ್ವಾಸ ಹೆಚ್ಚಿತು. ಕುದಿಯುವ ಪಾಯಸದಲ್ಲಿ ಪೂಜಾರಿ ಕೈ ಹಾಕುತ್ತಾನೆಂದು ಶಿಪಾಯಿಯಿಂದ ಅನಂತ ಕೇಳಿದಾಗ ಬೆರಗಾದ.

ನೂರೆಂಟು ಜನರ ವಸತಿಯಾದ ಹಳ್ಳಿ ಇಂದು ಅಂಗುಲದಷ್ಟು ಜಾಗೆ ಇರದ ಹಾಗೆ ನೆರೆದ ಜನಜಂಗುಳಿಯನ್ನು ನೋಡಿ ಅಚ್ಚರಿಗೊಂಡ. ದೇವಿಯ ಬಗ್ಗೆ ಹೆಚ್ಚು ವಿಶ್ವಾಸಿಕನೂ ಆದ.

ದಾರಿಯ ಎಡಬಲದಲ್ಲಿ ಹಾಲು ನಗೆ ಹರಿಸುತ್ತ ನಿಂತ ಬಾಳೆ ಭತ್ತಗಳ ಪಚ್ಚ ಪೈರುಗಳು ಅನಂತನಲ್ಲಿ ಅಡಗದ ಶ್ರದ್ಧೆಯನ್ನು ಹೆಚ್ಚಿಸಿದವು. ಮಂದವಾಗಿ ಹರಿಯುವ ತಾಯಿ ತುಂಗಭದ್ರೆ ಮನಕೆ ಪಾವನತೆ ನೀಡಿದಳು. ದೇವಿಯ ದರ್ಶನಕ್ಕೆ ಹೋದ. ಎದ್ದು ನಿಂತ ದೇಹ ಬಗ್ಗಿ ಪ್ರಣಾಮ ಮಾಡಿತು. ಏಳುವ ಮೊದಲೇ ಅರ್ಚಕ ಕೈಯಲ್ಲಿ ಫಲ ಕೊಟ್ಟ.

ಅನಂತ ಬಂದದ್ದರಿಂದ ಕಳ್ಳಕಾಕರು, ದರೋಡೆಗಾರರು ದೂರಿನಿಂದಲೇ ದೇವಿಗೆ ಶರಣು ಹೊಡೆದರು. ಆದರೂ ಅನಂತ ದಿನಕ್ಕೊಂದು ವೇಷ ಧರಿಸಿ ಜನರ ಗುಂಪಿನಲ್ಲಿ ಅಡ್ಡಾಡುತ್ತಿದ್ದ.

ಒಂದು ರಾತ್ರಿ ಒಂಭತ್ತರ ಸಮಯ; ಎಲ್ಲಿಯೋ ಚೀರಾಟ ಕೇಳಿಸಿತು. ಧಾವಿಸಿದ ಅನಂತ. ಒಬ್ಬ ಗಡ್ಡಬಿಟ್ಟ ಮುದುಕ, ಅವನ ಹಿಂದೆ ಗಿಡಗದಿಂದ ತಪ್ಪಿಸಿಕೊಂಡ ಹಕ್ಕಿಯಂತಿರುವ ಬಾಲೆ, ಅವರೆದುರಿನಲ್ಲಿ ಶಸ್ತ್ರಪಾಣಿಗಳಾದ ಇಬ್ಬರು ನಡುಹರೆಯದವರು. " ಏ ಮುದುಕಾ, ಬಿಡತೀ ಇಲ್ಲೋ ಆಕಿನ್ನ ! ಮುಂಜಾವನ್ಯಾಗ ಈಗ ಬರತೀನಿ ಅಂತ ರೂಪಾಯಿ ಇಸಗೊಂಡಾಳ " ಅಂದ ಅವರಲ್ಲೊಬ್ಬ. ಅನಂತನ ಖೊರ್ಡಾ "ಬಿಡುವದಿಲ್ಲ ಆ ಹುಡಿಗಿನ್ನ!" ಎಂದು ಉತ್ತರ ಹೇಳಿತು. " ಯಾಕೊ ! ನಿನಗ ಬೇಕಾಗ್ಯಾಳ ಕಾಣಸತೈತಿ ; ಅದಕ್ಕ ಬಂದೇನ ? ಎಲೆ, ಏನ ನೋಡತಿ ಹಾಕಲೆ ಚೂರಿ ಇವಗ " ಅಂದ ತುಂಟರ ತಂಡದಲ್ಲೊಬ್ಬ. ಅನಂತನ ಪಿಸ್ತೂಲು ಬಾಯಿ ತೆರೆಯಿತು. ತುಂಟರು ಕಾಲಿಗೆ ಬುದ್ಧಿ ಹೇಳಿದರು. ಅನಂತನ ಸೀಟಿ ಕೂಗಿತು. ಶಿಪಾಯಿಗಳು ಬಂದು ಆ ಪುಂಡರನ್ನು ಸೆರೆಹಿಡಿದರು. ಅನಂತ ಮುದುಕನಿಗೆ ಟಾರ್ಚ ಹಾಕಿದ. " ಕ್ಯಾ ಬಾಬು, ಪಹಚಾನ ನಹಿ ಹೈ ಕ್ಯಾ ? " ಎಂದ. ಅನಂತನಿಗೆ ಪರಿಚಯ ವಿದ್ದ ಭಾಸವಾದರೂ ' ಮಾಫ ಕೀಜಿಯೇ, ಯಾದ ನಹಿ ಆರಹೆ ಹೈ " ಅಂದ. " ಅರೇ ಬಾಬು, ಇಸ್ಪಿತಾಲ ಭೂಲಗಯೆ " ಎಂಬ ಶಬ್ದ ಕೇಳಿದ ಕೂಡಲೆ ಅನಂತ ಮುದುಕನ ಪಾದ ಹಿಡಿದ. ಶೇಖ ದಾದಾ ನಡೆದ ಕಥೆ ವಿವರಿಸುತ್ತ ಅನಂತನ ಕ್ಯಾಂಪಿಗೆ ಬಂದ.

ಪ್ರಾಣದಾತೃ ದಾದಾರಿಗೆ ಕ್ಷಮೆ ಕೇಳಿದ. ಸುಖಸಮಾಚಾರ ಸುರುವಾಯಿತು. ' ನವಕರಿ ಬಿಟ್ಟೆ ಇಲ್ಯಾಕ ದಾದಾ ? "

" ಎದಕ್ಕ ನವಕರಿ ಬಾಬು ? ಅಂದು ಮುಸಲ್ಮಾನರು ನನ್ನನ್ನು ಹಿಂಸಿಸಿದ್ದರೆ ಇಂದು ಹಿಂದುಗಳೇ ನನ್ನ ಮನೆ ಲೂಟಿ ಮಾಡಿದ್ದಾರೆ. ಇದ್ದೊಬ್ಬ ಮಗನೂ ಪಂಜಾಬಿನ ದಂಗೆಯಲ್ಲಿ ಸತ್ತುಹೋದ. ಅಲ್ಲಿಯ ನನ್ನ ಮನೆಯೂ ಬೂದಿಯಾಗಿದೆ. ಯಾತಕ್ಕ ಈ ಜೀವ ? ಯಲ್ಯಾದರೂ ಜನರ ಸೇವೆ ಮಾಡಕೋತ ಇದ್ರ ಆತೂ ಅಂತ ರಾಜೀನಾಮೆ ಕೊಟ್ಟೇನಿ " ಅಂದರು.

ಅನಂತನ ನಯನಗಳು ನೀರುದುಂಬಿದವು. ಆದರೆ ಬೀದರಿನಲ್ಲಿ ತೆರೆಯಬೇಕಾಗಿದ್ದ ದವಾಖಾನಿಗೆ ತಕ್ಕ ವರ ಸಿಕ್ಕಿತೆಂದು ಒಳಗೆ ಅರಳಿದನು. ತನ್ನ ವಿಚಾರ ದಾದಾರಿಗೆ ತಿಳಿಸಲು ದಾದಾ " ಅವನ ಇಚ್ಛೆಯೇ ಹಾಗಿದ್ದರೆ ಯಾಕೆ ಬ್ಯಾಡ ? ಜರೂರ ಆವೂಂಗಾ " ಎಂದರು. ಅನಂತನು ಜಾತ್ರೆಯಲ್ಲಿ ಕೊಂಡಿದ್ದೆಂದರೆ ದಾದಾರ ಒಪ್ಪಿಗೆ. " ಬಾಹರ ಕೋಯೀ ಆಯೇ ಹೈ ಸಾಬ " ಎಂದ ಶಿಪಾಯಿ. ಅನಂತ, " ಬುಲಾವ್ " ಎಂದ. ಬಂದವ ಬೀದರಿನ ಭಯ್ಯಾ.

ಅನಂತನಿಗೆ ಆನಂದ ಅತಿಯಾಯಿತು. ದಾದಾರ ಪರಿಚಯ ಮಾಡಿಕೊಟ್ಟು, ಅವರು ತನ್ನ ವಿನಂತಿಯನ್ನು ಒಪ್ಪಿದುದನ್ನು ತಿಳಿಸಿದ. ಭಯ್ಯಾ ಉಬ್ಬಿನಲ್ಲಿ ಕುಣಿದುಬಿಟ್ಟ. " ಅಲ್ಲಾ ಅನಂತಬಾಬು, ಶಮಾ, ಮಲ್ಲರ ಲಗ್ನಕ್ಕೆ ಪತ್ರ ಬರೆದ್ರೂ ಯಾಕ ಬರಲಿಲ್ಲ " ಎಂದ ಭಯ್ಯಾ. " ಮಾಫ ಕರೊ ಭಯ್ಯಾ, ಬಹುತ ಕಾಮಥಾ " ಎಂದ ಅನಂತ.

ಜಾತ್ರೆ ಮುಗಿದದ್ದರಿಂದ ಮೂವರೂ ರಾಯಚೂರಿಗೆ ಹೋಗುವ ಮೊದಲು ಅದೇ ತುಂಗಭದ್ರೆಯ ದಡದಲ್ಲಿ ನಿಂತು, ಬಂದ ಭಕುತರ ಅಘವೃಂದ ಕಳೆಯುವ ಮಂತ್ರಾಲಯದ ರಾಯರ ಸಾನಿಧ್ಯಕ್ಕೆ ಹೋಗಿ ದರ್ಶನ ತೆಗೆದುಕೊಂಡರು.

ಆ ಪ್ರಶಾಂತ ವಾತಾವರಣ, ಆಧ್ಯಾತ್ಮಿಕ ಪ್ರಕಾಶ, ಮೂವರನ್ನೂ ಮಾರಮಣ ಶಿಷ್ಯರಲ್ಲಿ ಮೊರೆಯಿಡಿಸಿತು. ತ್ರಿವಿಧ ತಾಪಗಳಿಂದ ತಪಿಸುತ್ತ

ಮೋಚಕರಾಗಲು ಯಾಚಕರಾಗಿ ಬಂದ ಜನಕೋಟಿಯನ್ನು ನೋಡಿ ಅನಂತ ಅಚ್ಚರಿಗೊಂಡ. ಪ್ರಸಾದ ಪಾದೋದಕ ಸೇವಿಸಿ ನೂರು ರೂಪಾಯಿ ಕಾಣಿಕೆ ಇಟ್ಟು ರಾಯಚೂರಿಗೆ ಹೊರಟ.

* * * *

ರಾಯಚೂರಿನಲ್ಲಿ ಅನಂತನ ವರ್ಚಸ್ಸಿನಿಂದ 'ಸರ್ವಧರ್ಮ ಸಮ್ಮೇಳನಕ್ಕೆ ಭಯ್ಯಾನಿಗೆ ಸಾಕಷ್ಟು ಹಣವೂ ದೊರೆಯಿತು. ಅನಂತನ ಸಂಗಡ ಮುಂದಿನದೆಲ್ಲ ವಿಚಾರಿಸಿ ಭಯ್ಯಾ ಹೊರಟ. ದಾದಾನೂ ಬೆನ್ನು ಹತ್ತಿದರು.

ಮೈಯಲ್ಲಿ ಅಸ್ವಾಸ್ಥ್ಯವೆನಿಸಿದ್ದರಿಂದಲೂ 'ಬಾ ಎಂಬ' ಅನಂತನ ಪತ್ರ ಹೋಗಿದ್ದರಿಂದಲೂ ರಾಯರು ಕೋಲಳ್ಳಿಯಲ್ಲಿಯ ಎಲ್ಲ ಕೆಲಸ ಭಟ್ಟರಿಗೆ ಒಪ್ಪಿಸಿ ಮಗನಿದ್ದ ರಾಯಚೂರಿಗೆ ಬಂದರು.

ತಾಯಿಯ ರೂಪವನ್ನೂ ತಂದೆಯಲ್ಲಿಯೇ ಕಾಣುತ್ತಿದ್ದ ಅನಂತನಿಗೆ ರಾಯರ ಸಮಾಗಮವು ಮೋದಪ್ರದವಾಯಿತು. ಮಗನ ಜತೆಯಲ್ಲಿ ರಾಯರಿಗೆ ಇರುವದೆಂದರೆ ಬಲು ಹಿಗ್ಗು. ನೀರು ಕುಡಿದಂತೆ ದಿನ ತಿರುಗಹತ್ತಿದವು. ಸರ್ವ ಧರ್ಮ ಸಮ್ಮೇಳನದ ದಿನಗಳೂ ಸಮೀಪಿಸಿದವು.

ಒಂದು ಮಧ್ಯಾಹ್ನ. ಬೀದರಿನಿಂದ ಬಂದ ಓಲೆಯನ್ನು ತಂದೆಯ ಎದುರು ಅನಂತ ಓದಹತ್ತಿದ. ಒಮ್ಮೆಲೇ ರಾಯರು ಬಿಕ್ಕಹತ್ತಿದರು. ಅನಂತ ನೀರು ಕೊಟ್ಟ. ಬಿಕ್ಕು ಹೆಚ್ಚುತ್ತ ನಡೆದವು. ಕ್ಷಣಾರ್ಧದಲ್ಲಿ ರಾಯರು ಮಲಗಿದರು. ಅನಂತ, "ಅಪ್ಪಾ ಅಪ್ಪಾ" ಎಂದ. ರಾಯರು ಸನ್ನೆ ಮಾಡಿದರು. ಅನಂತ ತೊಡೆ ಕೊಟ್ಟ. ಶಿಪಾಯಿ ಡಾಕ್ಟರರನ್ನು ಕರೆಯಲು ಹೋದ. ಆದರೆ ಡಾಕ್ಟರು ಬರುವ ಮೊದಲೇ ರಾಯರ ಪ್ರಾಣಪಕ್ಷಿ ಹಾರಿಹೋಯಿತು. ಅನಂತ ಒಬ್ಬನೇ ಒಬ್ಬ. ಗಾಬರಿಯಾಗಿ "ಅಪ್ಪಾ ಅಪ್ಪಾ" ಎಂದು ಒದರುತ್ತಲೇ ಕೂತ. ಡಾಕ್ಟರು ಬಂದು ಹೇಳಿದ ಮೇಲೆ ಏನೂ ತಿಳಿಯದೆ ತಲೆಹಿಡಿದು ಕೂತುಬಿಟ್ಟ.

ಮುಂದಿನ ಯಾವ ಕೆಲಸವೂ ನಿಲ್ಲಲಿಲ್ಲ. ತಡೆಯಿಲ್ಲದೆ ಸಾಗಿತು. ಧಾರ್ಮಿಕ ವಿಧಿಯೂ ಕೊನೆಗೊಂಡಿತು.

ತಂದೆಯ ವಿರಹದ ತಾಪ, ಒಡವಾಗ್ನಿಗಿಂತಲೂ ಭೀಕರವಾಯಿತು ಅನಂತನಿಗೆ. ಅನಂತನ ಜೀವನಕ್ಕೆ ಇದೊಂದು ಮುಂಗಾರಿ ಸಿಡಿಲು.

ಸತ್ತ ದಿನಗಳು ಸುತ್ತಿಹೋದವು. ಬಂದ ಬಳಗವೂ ಊರಿಗೆ ಹೋಯಿತು. ಆದರೆ ಅನಂತನನ್ನು ಸಮಾಧಾನಪಡಿಸಲಿಕ್ಕೆ ಭಟ್ಟರು ಮಾತ್ರ ನಿಂತರು. ಅನಂತನ ಕೋಲಳ್ಳಿಯ ಋಣ ಸಮಾಪ್ತಿಗೊಂಡಿತು.

ಸರಕಾರೀ ಕೆಲಸಕ್ಕೆ ಯಾವ ಸುಖ-ದುಃಖದ ಚಿಂತೆ ಇಲ್ಲ. ಅನಂತನ ಅಧಿಕಾರ ರಥ ಸಾಗಹತ್ತಿತು. ನವಕರಿ ಕೇಳುವದೆ?

ಆಫೀಸಿನ ಕುರ್ಚಿಯಲ್ಲಿ ಕೂತರೆ ಸಾಕು, ಅನಂತನ ಎಲ್ಲ ದುಃಖ ಅಡಗುತ್ತಿದ್ದವು. ಎದುರು ನಿಲ್ಲುವದೆಂದರೆ ಕೆಲಸ, ಕರ್ತವ್ಯ ಒಂದೇ. ಘಂಟೆ ಘಂಟೆಗಳ ವರೆಗೂ ಅವಿಶ್ರಾಂತ ಕೆಲಸ ಮಾಡಿದರೂ ದಣಿವಿಲ್ಲ, ದುಃಖವಿಲ್ಲ ಅನಂತನಿಗೆ. ಮನೆಗೆ ಬಂದರೆ ಎದುರು ನಿಂತಿರುವ ಮಾತಾ-ಪಿತರ ಛಾಯಾ ಚಿತ್ರ ಮೋಹ ಹುಟ್ಟಿಸುತ್ತಿತ್ತು. ಅದು ಜಗದ ರೂಢಿ.

ಬಹಿರಂಗದಲ್ಲಿ ಅನಂತನ ವಿರುದ್ಧ ಇಂದು ಯಾವ ಶಕ್ತಿಗಳೂ ಇಲ್ಲ. ಅಂತರಂಗದಲ್ಲಿ ಮಾತ್ರ ನಡೆದಿರಬಹುದು! ಇಡೀ ಜಿಲ್ಹೆಗೆ ಜಿಲ್ಹೆಯೇ ಅನಂತನನ್ನು ನೆನೆಸುತ್ತದೆ. ನೊಂದು, ಬೆಂದ ಜನಕ್ಕೆ ಅನಂತನೊಬ್ಬ ಕಾಮಧೇನು.

ಸಮ್ಮೇಲನದ ಕಾರ್ಯಕ್ಕಾಗಿ ಅನಂತ ರಜೆಗಾಗಿ ಅರ್ಜಿ ಹಾಕಿ, ಕಾದರಿಯವರಿಗೂ ಬರಲು ಕಾಗದ ಬರೆದ. ರಜೆಯ ಮಂಜೂರಿಯೂ ದೊರೆಯಿತು. ಧಾರವಾಡಕ್ಕೆ ಪ್ರೊಫೆಸರರಿಗೂ, ಸರೋಜಳಿಗೂ ಕಾಗದ ಕಳಿಸಿದ. ಭಟ್ಟರು ಎಲ್ಲ ಸಿದ್ದತೆಯಿಂದಲೇ ಬರಬೇಕೆಂಬ ಅಗ್ರದೋಲೆಯೊಂದನ್ನೂ ಪ್ರೊಫೆಸರರಿಗೆ ಬರೆದರು.

ಅನಂತ ರಾತ್ರಿ ಗಾಡಿ ಹತ್ತಿ ಬೀದರಿಗೆ ನಡೆದ ಭಟ್ಟರ ಸಂಗಡ.

# ೧೮

ಬೀದರಿನಲ್ಲಿಯೇ ಹಿಂದೆ ಕೆಲದಿನ ಇದ್ದ ಅನಂತನಿಗೆ ಈಗಿನ ಸ್ಟೇಶನ್ನು ನೋಡಿ ಸಂಶಯ ಹುಟ್ಟಿತು. ಎಲ್ಲೆಡೆಯಲ್ಲಿ ಹಾಸುಹೊಕ್ಕಾಗಿ ನಿಂತ ಹೊಸ ತನ. ಬೀದರಿನಲ್ಲಿಯ ಪ್ರತಿಯೊಂದು ಅಣು-ಪರಮಾಣುಗಳು ಸಮ್ಮೇಲನದ ಸಿಹಿತನ ಸಾರಿ ಹೇಳುತ್ತಿದ್ದವು.

ಹಸರು ಬಣ್ಣದ ತಳಿರು-ತೋರಣಗಳ ಸಿಂಗಾರ. ಹಲವು ವರ್ಣದ ಹಾಳೆಯ ಬಾವುಟಗಳ ಅಲಂಕಾರ,ಬೀದರಿಗೊಂದು ಭಾಗ್ಯತನ ನೀಡಿದವು.ಬರುವ ಅತಿಥಿ ಅಭ್ಯಾಗತರನ್ನು ಆದರಿಂದ ಸ್ವಾಗತಿಸಲು ಸದಾ ಸಿದ್ಧವಿದ್ದ ಸ್ವಯಂ ಸೇವಕರ ತಂಡ ಜನಸಾಗರದಲ್ಲಿ ಮಿನುಗುವ ಶ್ವೇತ ತಾವರೆ ಗುಂಪಿನಂತೆ ಕಾಣುತ್ತಿದ್ದವು. ಪ್ರತಿಯೊಂದು ಮನೆ-ಮಠ-ಮಸೀದೆ-ಮಂದಿರಗಳ ಮೇಲೆ ಸಮ್ಮೇಲನದ ಬಾವುಟ ಆಶೀನವಾಗಿದ್ದವು. ಭಯ್ಯಾ, ಕರೀಮ, ಮಲ್ಲರ ಅವಿರತ ಶ್ರಮದ ದ್ಯೋತಕ ಇದೆಲ್ಲ. ಅನಂತನ ಆನಂದ ಮಿತಿಮೀರಿತು. ಪೂರ್ಣ ತುಂಬಿದ ಮನದಿಂದ ' ವಹವ್ವಾ ಧನ್ಯ ' ಎಂದ.

ದೂರ ದೂರದಿಂದ ಜನ ಬರುತ್ತಲೇ ಇತ್ತು. ಎಲ್ಲರಿಗೂ ತಂಗಲು ಪ್ರತ್ಯೇಕ ವ್ಯವಸ್ಥೆ.

ಭಯ್ಯಾ, ಕರೀಮರು ಅನಂತನಿಗೆ ಸಮ್ಮೇಲನದ ಪೂರ್ವಸಿದ್ಧತೆಗಳನ್ನೆಲ್ಲ ವಿವರಿಸಿದರು. ಸಮ್ಮೇಲನದ ಸದಸ್ಯ ಮಂಡಳಿಯ ಪರಿಚಯ ಪ್ರಾರಂಭವಾಯಿತು. ಸ್ವಾಗತಾಧ್ಯಕ್ಷರು ಖಾಜೀ ಮೌಲ್ವೀ ಸಾಹೇಬರು. ಕಾರ್ಯದರ್ಶಿಗಳು ಬೂದಿ ಬಸನಗೌಡರು. ಕಾರ್ಯಕಾರೀ ಮಂಡಳದಲ್ಲಿ ಭೀಮಪ್ಪ, ಬಸಪ್ಪ, ರಾಘವಾಚಾರಿ, ರಾಚಯ್ಯ, ರಾಮಣ್ಣ, ರಾಜೇಸಾಬ. ಸ್ತ್ರೀಯರ ಪ್ರತಿನಿಧಿಗಳಾಗಿ ಶಮಾ, ಶಾಂತಕ್ಕ, ಸುಶೀಲಾ, ಸೋನಕ್ಕ ಇವರಲ್ಲದೇ ಮಾದರ ಮಲ್ಲವ್ವ, ಗೌಳಿಗೇರ ನಾಗಮ್ಮ, ಇದೆಲ್ಲ ಕೇಳಿ ನೋಡಿದ ಕೂಡಲೇ ಅನಂತ " ಸರ್ವಧರ್ಮ ಸಮನ್ವಯದ ಕಟ್ಟಡ ಕಟ್ಟಲು ಅವಶ್ಯವಾದ ಅಸ್ತಿಭಾರವೇ ಇದು " ಎಂದ.

ಧಾರವಾಡದಿಂದ ಬಂದ ಸರೋಜಳ ವಸತಿ ಶಮಾನಲ್ಲಿ. ಆದರೆ ಅನಂತ

ನದು ಭಟ್ಟರ ಸಂಗಡ ಕರೀಮನಲ್ಲಿ. ಶೀಖ :ದಾದಾರಲ್ಲಿ ಧಾರವಾಡದಿಂದ ಬಂದ ವಿರಕ್ತಮೂರ್ತಿ ಸ್ವಾಮಿಜಿ ಹಾಗೂ ಅವರ ಗೆಳೆಯ ಪ್ರೊಫೆಸರ ರಾಘವೇಂದ್ರುನ್ನರು. ಮದ್ರಾಸಿನಿಂದ ಬಂದ ಕ್ರಿಶ್ಚಿಯನ್ ಡಾಕ್ಟರ ಫೆಡ್ರಿಕ್ಸರೂ ಮುಂಬಯಿಯಿಂದ ಬಂದ ಮೋಹನಲಾಲರೂ ಪ್ರತ್ಯೇಕ ಪ್ರತ್ಯೇಕವಾಗಿಯೇ ಉಳಿದರು. ಇದಲ್ಲದೆ ಉಳಿದವರಿಗೆಲ್ಲ ಇಳಿದುಕೊಳ್ಳಲು ಹಾಯಸ್ಕೂಲೇ ಮೀಸಲಾಗಿತ್ತು.

ಮರುದಿನ ಮುಂಜಾನೆ ಸಮ್ಮೇಲನದ ಸ್ಥಳ ಪರಿಶೀಲನೆಗೆ ಅನಂತನ ಬಳಗ ನಡೆಯಿತು. ಅದು ಚಿಕ್ಕದಿದ್ದರೂ ಚೊಕ್ಕಟವಾಗಿತ್ತು. ಸಮ್ಮೇಲನದ ಅಂಗವಾಗಿ ಗೃಹಕೈಗಾರಿಕೆಗಳ ಪ್ರದರ್ಶನದ ವ್ಯವಸ್ಥೆ ಬೇರೆ. ಸ್ತ್ರೀಯರಿಗಾಗಿ ಕೂಡ್ರಲು ಪ್ರತ್ಯೇಕ ವ್ಯವಸ್ಥೆ. ಕುರ್ಚಿ, ಟೇಬಲ್ಲುಗಳ ತಾಕಲಾಟವಿಲ್ಲ. ಎಲ್ಲರಿಗೂ ನೆಲದ ಮೇಲೆಯೇ ಆಸನ. ಅಧ್ಯಕ್ಷ ಅಥಿತಿಗಳಿಗೆ ಆಶೀನರಾಗಲು ಎತ್ತರವಾದ ಕಟ್ಟೆ. 'ಬೀದರೀ ವರ್ಕ್ಸ' ಎಂದು ವಿಖ್ಯಾತಿ ಘಳಿಸಿದ ಸಂಸ್ಥೆಯಲ್ಲಿ ತಯಾರಾದ ವಸ್ತುಗಳಿಂದ ಮಂಟಪದ ಅಲಂಕಾರ. ಹಾಗೆಯೇ ನೋಡುತ್ತ ಮುಂದೆ ಸಾಗಿತು ಮಂಡಳಿ. ಪ್ರತ್ಯಕ್ಷ ಇಳಿದು ಬಂದು ನಿಂತಂತಿರುವ ಬುದ್ಧ, ಬಸವ, ಶಂಕರ, ಕಬೀರ, ಮಹಮ್ಮದ, ಮಧ್ವರ ಮೂರ್ತಿಗಳಲ್ಲದೇ ಜನತೆಗಾಗಿ ಜೀವದಾನ ಮಾಡಿದ ಕ್ರಿಸ್ತ, ಗಾಂಧಿ ಮುಂತಾದವರ ತೈಲಚಿತ್ರಗಳು ಆಕರ್ಷಿಸದಿರಲಿಲ್ಲ. ಮಗ್ಗುಲದಲ್ಲಿಯೇ ಸ್ವಲ್ಪ ಕೆಳಗೆ ನಗುತ್ತ ನಿಂತ ವೆಂಕಟರಾಯರ ಚಿತ್ರ ಅನಂತನ ದೃಷ್ಟಿಯಿಂದ ದೂರ ಹೋಗಲಿಲ್ಲ. ಅಡಗಿದ ದುಃಖ ಕಣ್ಣಿನಲ್ಲಿ ಕಾಣಿಸಿತು. ಅವಲೋಕನೆ ನಡದೇ ಇತ್ತು. "ಇವೇಕೆ ಈ ಎರಡು ಪ್ರತ್ಯೇಕ ಕಟ್ಟೆ" ಎಂದ ಅನಂತ. ಎಲ್ಲರೂ ನಕ್ಕರು. ದಾದಾ ಮಾತ್ರ "ನಿನ್ನ ಸಲುವಾಗಿ" ಅಂದರು. ಅನಂತನೂ 'ಓಹೊ' ಎಂದ. ಸರೋಜ ಮೋರೆ ತಿರುಗಿಸಿದಳು. ಹೊತ್ತಾಗಿದ್ದರಿಂದ ಎಲ್ಲರೂ ತಿರುಗಿದರು.

ಸರೋಜಳಿಗೂ ಪ್ರೊಫೆಸರರಿಗೂ ಭಯ್ಯಾ ಮೊದಲೇ ತಿಳಿಸಿದ್ದರಿಂದ ಸರೋಜಳ ಸಂಗಡ ಆವಳ ಮಾವನೂ ಬಂದಿದ್ದನು. ಅನಂತನ ಬಳಗವೆಂದರೆ ಇಡೀ ಬೀದರವೆ. ಮೇಲಾಗಿ ಕೋಲಳ್ಳಿಯಿಂದಲೂ ಭಟ್ಟರಲ್ಲದೆ ಬಸವಂತ, ಕನಕಪ್ಪರೂ ಬಂದಿದ್ದರು.

ಗೋಧೂಳಿಯ ವೇಳೆ. ಮಂಟಪದ ತುಂಬ ಜನಸಮ್ಮರ್ದ. ಅನಂತನ ಬಳಗಕ್ಕೆ ಇಂದು ವಿಶೇಷ. ಅನಂತನಲ್ಲಿಯೂ ಒಂದು ವಿಶೇಷತನ ಮೂಡಿದೆ. ಭಟ್ಟರು ಅನಂತನನ್ನು ತಂದು ಕೂಡಿಸಿದರು. ಪ್ರೊಫೆಸರರು ಸರೋಜಳನ್ನು ತಂದು ಕೂಡಿಸಿದರು. ತಡವಿಲ್ಲದೆ ವೇದ, ಕುರಾಣ, ಬಾಯಬಲ್ಲುಗಳ ಪಠನ ಸುರುವಾಯಿತು. ಅನಂತ ಸಾವಕಾಶವಾಗಿ ಎದ್ದು ಸರೋಜಳಿಗೆ ಮಂಗಳ ಸೂತ್ರ ಕಟ್ಟಿದನು. ಮಂಗಲೆಯಾಗಿದ್ದ ಸರೋಜ ಪರಮ ಮಂಗಳಕಾರಿಣಿ ಯಾದಳು. ಪೃಥ್ವಿಯಲ್ಲಿ ಪ್ರತ್ಯಕ್ಷ ಆರುಂಧತಿಯಾದಳು. ಸ್ವರ್ಗೀಯ ಕಮಲಾ ಬಾಯರ ಮನೆ ಸೊಸೆಯಾದಳು. ಸಮ್ಮೇಲನದ ಸಾವಿರಾರು ಜನರ ತಂಗಿ ತಾಯಿಯಾದಳು.

ಸಮ್ಮೇಲನದಲ್ಲಿ ಮಿನುಗುವ ಅನಂತ ನಕ್ಷತ್ರರಾಶಿಯಲ್ಲಿ ಸರೋಜಳೊಬ್ಬ ಪೂರ್ಣಚಂದಿರೆ. ಮದುವೆ ನಿರಾಡಂಬರದಿಂದ ನಡೆದರೂ ಮಲ್ಲ, ಕರೀಮರ ಆನಂದ ಅಳತೆ ಮೀರಿತ್ತು. ಅನಂತನ ಸಂಗಡ ಮೊದಲಿಗೆಷ್ಟೋ ಸಲ ಮಾತಾಡಿದ್ದರೂ ಸರೋಜಳೀಗ ಅನಂತನನ್ನು ಕಣ್ಣೆತ್ತಿ ನೋಡಲು ಸಹ ನಾಚಹತ್ತಿದಳು. ಹೆಣ್ಣಿನ ಜೀವನ ಪೂರ್ಣ ಮಾಡುವದು ಮದುವೆಯಲ್ಲವೆ ?

ಮರುದಿನವೇ ಸಮ್ಮೇಲನ. ಸಮ್ಮೇಲನದ ಕಾರ್ಯಕ್ರಮದ ಪಟ್ಟಿ ಮೊದಲೇ ಹಂಚಲ್ಪಟ್ಟಿತ್ತು. ಸೂಕ್ತ ರೀತಿಯಿಂದ ಕಾರ್ಯಾರಂಭವಾಯಿತು. ಗಣ್ಯ ವ್ಯಕ್ತಿಗಳು ಭಾರತದ ನಾಲ್ಕು ಮೂಲೆಗಳಿಂದಲೂ ಬಂದಿದ್ದರು. ಇದಲ್ಲದೆ ಹೈದ್ರಾಬಾದ ರಾಜ್ಯದ ಕೆಲವು ಹಿರಿ ಅಧಿಕಾರಿಗಳೂ ಹಾಜರ ಆದರು. ಮಂಟ ಪದ ತುಂಬೆಲ್ಲ ಶಾಂತತೆ ಪ್ರಸನ್ನತೆ ಹಬ್ಬಿದೆ.

ಶಮಾ, ಸರೋಜರ ಸ್ವಾಗತ ಗೀತೆಯಿಂದ ಆರಂಭವಾಯಿತು ಸಮ್ಮೇಲನ. ನಂತರ ಉರ್ದು ಮಿಶ್ರಿತ ಕನ್ನಡದಲ್ಲಿ ಸ್ವಾಗತಾಧ್ಯಕ್ಷ ಖಾಜೀ ಮೌಲ್ವಿಯವರ ಸ್ವಾಗತ ಭಾಷಣವಾಯಿತು. ಅಧ್ಯಕ್ಷಸ್ಥಾನದಲ್ಲಿ ವಿರಾಜಮಾನರಾಗಿದ್ದ ಸಮ್ಮೇ ಲನದ ವಸಿಷ್ಠರಂತಿದ್ದ ಶೀಖ ದಾದಾ ಒಬ್ಬೊಬ್ಬರನ್ನೇ ಭಾಷಣ ಮಾಡಲು ಕರೆಯಹತ್ತಿದರು. ದಾದಾರ ಓಜಸ್ಸು, ತೇಜಸ್ಸುಗಳು ಅವರ ಅಂಗಾಂಗಗಳಲ್ಲಿ ಹರಿಯುತ್ತಿತ್ತು.

ಮೊದಲು ಮದ್ರಾಸದಿಂದ ಬಂದ ಕ್ರಿಶ್ಚಿಯನ್ ಡಾಕ್ಟರ ಫೆಡ್ರಿಕ್ಸರು

ಆರಂಭಿಸಿದರು. ಭಾಷಣ ಇಂಗ್ಲಿಷದಲ್ಲಿದ್ದರೂ ತೀರ ಸರಳ. ‘ Know thy Self ’ ‘ Live and Let live ’ ಎಂಬ ಸೂತ್ರಗಳಿಗೆ ವಿವರವಾದ ಭಾಷ್ಯ ಹೇಳಿದರು. ಹಳೆ ಮತ್ತು ಹೊಸ ವಿಚಾರಗಳಲ್ಲಿ ಅಡಕವಾದ ಸೃಷ್ಟಿನಿರ್ಮಾಣ, ( Creation of world ) ಅಬ್ರಹಾಮನ ಶಾಂತಿ ಮತ್ತು ಪ್ರೀತಿ, ಜೋಸೆಫನ ಕಥೆ, ಬೆಂಝಾಮಿನನ ಇಜಿಪ್ತ ಪಯಣ, ಯೇಸುವಿನ ಪವಾಡ, ನಜಾರೆಥದಲ್ಲಿಯ ಜೇಸುವಿನ ವಚನ, ಸಿರಿವಂತನ ಕಥೆ, ಒಣಗಿದ ಅಂಜೂರಿ ಕಥೆ. ಜೇಸು ಕಳಿಸಿದ ಎಪ್ಪತ್ತೆರಡು ಶಿಷ್ಯರುಗಳ ಬಗ್ಗೆ ವಿವರಿಸುವಾಗ ಅಡಗಿದ ಕ್ರಿಶ್ಚಿಯನ್ ತತ್ವವನ್ನೂ ತೇಲಿಸಿದರು. “ ದೇವಾ ನಿನಗಾಗಿ ಕಾದಿರುವೆ; ನೀನಿಲ್ಲದೆ ಹುಲ್ಲಿನಂತೆ ಕೊರಗಿರುವೆ ; ಬೇಗು ಬೆಳಗೂ ನಿನ್ನನೇ ಅರಸುತಲಿರುವೆ ; ನೀನಲ್ಲವೇ ಜಗದ ತಾತ ” ಎಂಬ ವಚನ ಅನ್ನುವಾಗ ಡಾಕ್ಟರರ ನಾಡಿನಾಡಿಗಳೂ ಮಿಡಿಯುತ್ತಿದ್ದವು.

ಭಾಷಣ ಮುಗಿಸುವ ಮೊದಲು, “ ದಿನವೂ ತನುಮನಗಳಲ್ಲಿ ಸ್ವಚ್ಛವಿರು, ಹಿರಿಯರಿಗೆ ವಂದಿಸು, ಜನರನ್ನು ಪ್ರೀತಿಸು, ಸ್ತ್ರೀಸಂಗ ವರ್ಜಿಸು, ಕಳವಿನಿಂದ ದೂರವಿರು. ಪರಸ್ತ್ರೀ, ಪರಧನಗಳನ್ನು ಕನಸಿನಲ್ಲಿಯೂ ಕಾಣಬೇಡ ” ಎಂಬ ಕೋಟಿ ನಾಣ್ಯ ಬಾಳುವ, ಸಿನಾಯಿ ಪರ್ವತದಲ್ಲಿ ಜೇಸುವು ಹೇಳಿದ ಹತ್ತು ಕರ್ತವ್ಯ ಕರ್ಮಗಳನ್ನೂ ಹೇಳಿದಾಗ ಕ್ರಿಶ್ಚಿಯನ್ ಧರ್ಮದ ತತ್ವಗಳು ಜನರ ಕಣ್ಣು ತೆರೆಯಿಸಿದವು.

ನಂತರ ದಾದಾ ಕೂಡ ಭಾಷಣ ಮಾಡಿದರು. ನಂತರ ಇಸ್ಲಾಂ ಧರ್ಮದ ಬಗ್ಗೆ ಭಯ್ಯಾನ ಹೆಸರು ಪಟ್ಟಿಯಲ್ಲಿತ್ತು. ಪೀಠಾಧಿಪತಿಗಳು ಭಯ್ಯಾನನ್ನು ಭಾಷಣ ಮಾಡಲು ಕರೆದರು.

“ಮಾ ನಖೂಲು ಇಲ್ಲಮಾ ಯುರಜಾ ಬಹಿಲ್ಲಾಹಿ”—ಅವನ ಅಪ್ಪಣೆಯ ವಿನಃ ನಾವು ಏನೂ ಮಾಡಲಾರೆವು. ಎಲ್ಲಕ್ಕೂ ಅವ್ಯಕ್ತನೂ, ಅಧ್ವಿಯುರ್ಯವೂ ಆದ ಅವನೇ ಕಾರಣ. “ ಇನ್ನಾ ಆತೊಯ ನಾಕಲ್ ಕೌಸರ ಫಸಲ್ಲಲಿ ರಬ್ಬಿಕ ವನಹರ”—ಹಿತಮಾಡಿದ ಪ್ರಭುವಿಗೆ ಬಾಳುದ್ದ ಋಣಿಯಾಗಿರು. ಅವನು ಸೃಷ್ಟಿಸಿದ ಜೀವಕೋಟಿಯನ್ನೆಲ್ಲ ಪ್ರೀತಿಸು. ಆ ದಿವ್ಯ ಪರಮಾತ್ಮನಿಗೇ ಕುರಾನಿನಲ್ಲಿ ‘ ಅರರವೂಫ ’ ಪ್ರೇಮಮಯ, ‘ ಅಲ ಲತೀಫ ’ ದಯಾಮಯ, ‘ ಅಸ

ಸಲಾಮು ' ಶಾಂತಿಮಯ ಅನ್ನುವರು. ಕುರಾನವು ಪರಮಾತ್ಮ ಪ್ರಾರ್ಥನೆ. ಅವನಿಂದ ನಿರ್ಮಿತವಾದ ಭೂಮಿಯಲ್ಲಿ ಅನ್ಯಾಯ ಮಾಡದಿರು. ಎಲ್ಲರೂ ಶಾಂತಿಮಾರ್ಗದಿಂದಲೆ ಬಯಸಿದ ಗುರಿಗೆ ಹೋಗುವರು. ಧರ್ಮದ ಬಗ್ಗೆ ಜುಲುಮೆ ಇಲ್ಲವೆಂಬದು ಒಂದನೇ ಸರಾಹದ ೨೫೬ನೇ ಶ್ಲೋಕದಲ್ಲಿದೆ. ನಂಬಿದವರ ರಕ್ಷಕನೇ ಅಲ್ಲಾ. ಸರ್ವವ್ಯಾಪಿಯಾಗಿರುವವ ಅಲ್ಲಾ. ಅದಕಾಗಿ ಮನ ಚುಚ್ಚುವ ವೃಷ್ಟಾನ್ನಕ್ಕಿಂತಲೂ ಕ್ಷಮಾಪೂರಿತ ಹಿತವಚನ ನೀಡು.

ಅನಾಥರನ್ನು ನಿನ್ನವರೆಂದು ನಂಬು. ಸ್ತ್ರೀಯರ ಹಕ್ಕನ್ನು ಅವರಿಗೆ ಬಿಟ್ಟುಕೊಡು. ನಾರಿಯರ ಜೀವ ಮತ್ತು ಮಾನರಕ್ಷಕರೇ ನರರು. ವೈರಿಗಳ ಸಂಗಡವೂ ನಡೆವಳಿಕೆ ಹಿತವಿರಲಿ. ಹೃದಯದಿಂದ ಕ್ರೋಧ ಕಿತ್ತಿ ಬಿಸುಡಿದಲ್ಲಿ ಮಾತ್ರ ಮಾನವನಾಗುವಿ. ದ್ವೇಷವು ಘನಪಾಪ " ಎಂಬ ಉಕ್ತಿಗಳನ್ನು ಒಂದೊಂದಾಗಿ ಹರಿಸಹತ್ತಿದ. ಕುರಾನಿನಲ್ಲಿ ತುಂಬಿದ ಮಾನವತೆಯ ಲೋಕ ಸಂಗ್ರಹ ಕಾರ್ಯಗಳನ್ನು ತಿಳಿತಿಳಿಯಾಗಿ ಅರುಹಿದ. ಸ್ತ್ರೀಯರ ಬಗ್ಗೆ, ಅನಾಥರ ಬಗ್ಗೆ, ಮಕ್ಕಳ ಬಗ್ಗೆ, ಮಾನವರ ಬಗ್ಗೆ ಇಸ್ಲಾಂ ಧರ್ಮದಲ್ಲಿದ್ದ ಅಮೋಘವಾದ ವಿಚಾರ ಪರಂಪರೆಗಳನ್ನು ಸೋದಾಹರಣವಾಗಿ ಸಾದರಪಡಿಸಿದ. " ಜನ ಕೆಟ್ಟದ್ದು ಜಾತಿಯಿಂದಲ್ಲ, ಜಾತ್ಯಂಧರಿಂದ " ಎಂಬ ಭಯ್ಯಾನ ಮಾತು ಪ್ರತಿಯೊಬ್ಬರ ಹೃದಯಕ್ಕೂ ಬಡಿಯಿತು. " ದೇವನೊಬ್ಬ, ನಾಮ ಹಲವು " ಎಂದು ಹೇಳಿ " ರಾಮ ರಹೀಮ ಏಕಹೀ ಹೈ " " ಈಶ್ವರ ಅಲ್ಲಾ ತೇರೆ ನಾಮ " ಎಂಬ ವಾಕ್ಯಗಳನ್ನು ಉಚ್ಚರಿಸಿ, ತನ್ನ ಭಾಷಣ ಮುಗಿಸಿದ. ನೆರೆದ ಜನಕ್ಕೆಲ್ಲ ಆನಂದ ಹೇಳಲಸಾಧ್ಯ.

ಮೂರನೆಯವರಾಗಿ ವೇದಿಕೆಯ ಮೇಲೆ ಭಟ್ಟರು ಬಂದರು.

"ಸರ್ವೇ ಜನಾಃ ಸುಖಿನೋ ಭವಂತು" ಎಂದು ನುಡಿದು ಆರಂಭಿಸಿದರು. ಅವರದು ನಿರರ್ಗಳವಾದ ವಾಕ್‌ಝುರಿ. " ಅಧ್ಯಕ್ಷರೆ, ಅಕ್ಕ-ತಂಗಿ, ಅಣ್ಣ-ತಮ್ಮಂದಿರೆ, ಹಿಂದೂ ಧರ್ಮದ ಬಗ್ಗೆ ಎಲ್ಲವನ್ನೂ ನಾನು ಮಾತನಾಡಲಾರೆ. ಆದರೆ ತಿಳಿದಷ್ಟು ಅರುಹುವೆ. ಧಾರ್ಮಿಕ ಕ್ಷಿತಿಜದಲ್ಲಿ ಹೊಸ ಅರುಣೋದಯವಾಗಹತ್ತಿದೆ. ಆ ದಿವ್ಯ ಪ್ರಭಾವಕ್ಕಾಗಿ ಮೊದಲು ನಾವೆಲ್ಲರೂ ಸಿದ್ಧರಾಗೋಣ. ವಿಶ್ವದಲ್ಲಿ ಮೇಲಿಂದ ಮೇಲೆ ಧರ್ಮಯುದ್ಧ, ಧರ್ಮಸೆರೆ, ಧರ್ಮಧೂಮ,

ಧರ್ಮಾಂತರ, ಧರ್ಮಾಂಧತನ ಎಂಬ ಪದಗಳನ್ನು ಕೇಳುತ್ತೇವೆ. ಅವುಗಳ ಸಂಗಡವೇ ಧರ್ಮ, ಧರ್ಮಕಾರ್ಯ, ಧರ್ಮಯಜ್ಞ, ಧಾರ್ಮಿಕ ಎಂಬ ಶಬ್ದ ಗಳನ್ನೂ ಕೇಳುತ್ತೇವೆ. ಅಂದ ಮೇಲೆ 'ಧರ್ಮ' ಅಂದರೇನು ? "ಧಾರಣೇನ ಇತಿ ಸಃ ಧರ್ಮಃ" ಯಾವದು ನಮ್ಮನ್ನು ಎತ್ತಿ ಹಿಡಿಯುತ್ತದೆಯೊ ಅದೆ ಧರ್ಮ. 'ಧರ್ಮೋ ರಕ್ಷತಿ ರಕ್ಷಿತಃ" ಧರ್ಮವನ್ನು ನಾವು ಕಾಯ್ದರೆ ಅದು ನಮ್ಮನ್ನು ಕಾಯುತ್ತದೆ. ಧರ್ಮವು ವ್ಯಕ್ತಿಗಳಲ್ಲಿ ಬೇರೆ ಇರುವಂತೆ, ಸಮಾಜ-ಸಮಾಜಗಳ ಲ್ಲಿಯೂ ರಾಷ್ಟ್ರ-ರಾಷ್ಟ್ರಗಳಲ್ಲಿಯೂ ಬೇರೆ ಇರುತ್ತದೆ. ಒಂದು ಕಾಲದಲ್ಲಿ ಧರ್ಮವೆ ನಿಸುವದು ಇನ್ನೊಂದು ಕಾಲದಲ್ಲಿ ಅಧರ್ಮದ ಅವತರಣಿಕೆಯಲ್ಲಿ ಬರಬಹುದು. ಯಾವ ಕಾಲದಲ್ಲಿ ಯಾವ ಸ್ಥಿತಿಯಲ್ಲಿದ್ದರೂ "ಸರ್ವ ಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ" ನನ್ನನ್ನೆ ನಂಬು ಎಂಬ ಗೀತಾ ವಾಕ್ಯದ ಇಂಗಿತ ವೇನು ? 'ಧರ್ಮ' ಶಬ್ದವು ಧರ್ಮಗುರುಗಳ ಕೈಯಲ್ಲಿ ವಿಪರ್ಯಾಸವನ್ನು ಹೊಂದಿದೆ. ಧರ್ಮಾಂಧರ ಕೈಯಲ್ಲಿ ಅರ್ಥಾಂತರವಾಗಿವೆ. ಧರ್ಮವೆಂದರೆ ಸಾಮಾನ್ಯವಾಗಿ ಕರ್ಮ, ಕೆಲಸವೆನ್ನಬಹುದು. ಕರ್ತವ್ಯವೆಂದೂ ಕರೆಯಲಡ್ಡಿ ಯಿಲ್ಲ. ಧರ್ಮವೆಂದರೆ ರೀತಿ-ನೀತಿ. ಆಸ್ತಿಕ ಷಡ್‌ದರ್ಶನಗಳಲ್ಲಿ ಒಂದಾದ ದ್ವಾದಸೀ ಲಕ್ಷಣವುಳ್ಳ ಮೀಮಾಂಸಾ ಶಾಸ್ತ್ರದಲ್ಲಿ ಧರ್ಮದ ಲಕ್ಷಣ 'ಸ್ವಭಾವ' ಎಂದು ಹೇಳಿದೆ. ಆದರೆ ಸಾಂಖ್ಯರು 'ವೃತ್ತಿವಿಶೇಷಣ'ಕ್ಕೆ ಧರ್ಮ ಎಂದಿ ದ್ದಾರೆ. ಜ್ಞಾನಕ್ಕೆ ಜ್ಞಾನ ಮಿಲನವಾದಾಗ ಹುಟ್ಟುವ ವಾಸನೆಗೂ ಧರ್ಮ ವೆಂಬುದು ಸಾಂಖ್ಯರಲ್ಲಿ ಕೆಲವರ ಮತ. ವೈಶೇಷಿಕರಲ್ಲಿ ಆತ್ಮನ ಅಪೂರ್ವ ಗುಣವೇ ಧರ್ಮ. ಭಾಟ್ಟೇತರ ಮೀಮಾಂಸಕರೂ ಕೂಡ ಧರ್ಮ ಅಪೂರ್ವ ಎಂದಿದ್ದಾರೆ. ಅವರ ಸುಂದರವಾದ ಅರ್ಥವನ್ನು 'ಧರ್ಮ ಮೀಮಾಂಸ'ದಲ್ಲಿ ನಾವು ನೋಡಬಹುದು. ಮಾನವನಿಗೆ ಸಾಧನಾ ಶ್ರೇಯಸ್ಸು ಕೊಡುವ ಶಕ್ತಿ ಸಂಚಯವೇ ಧರ್ಮ. ಯಾವ ಮಾರ್ಗದಿಂದ ಲೋಕಸಂಗ್ರಹವೂ ಲೋಕ ಸಿದ್ಧಿಯೂ ಆಗುವದೋ ಅದೇ ಧರ್ಮ. ಯಾವ ಧರ್ಮದಲ್ಲಿ ಅನೀತಿ, ಅನಿಷ್ಟ, ಸುಳ್ಳು, ಸಂಶಯಗಳು ಇಲ್ಲವೋ ಅವೆಲ್ಲವುಗಳೂ ಉತ್ತಮ ಧರ್ಮಗಳೆಂದು ಮೀಮಾಂಸಾ ಶಾಸ್ತ್ರ ಸಾರಿದೆ.

ಈ ಧರ್ಮವನ್ನು ಆಚರಿಸುವ ಸ್ಥಲ ಈ ಭೂಮಿಯೇ. ಮಾನವ ಜನ್ಮ ಬರಲು ಈ ಜೀವ ಎಂಬತ್ತೇಳು ಲಕ್ಷ ದೇಹಗಳ ಧಾರಣೆ ಮಾಡಬೇಕಾಗುತ್ತದೆ.

ಆದ್ದರಿಂದ ಬುದ್ಧಿಜೀವಿಯಾಗಿ ಹುಟ್ಟಿದ ನಾವೆಲ್ಲರೂ ಧರ್ಮದಿಂದ ಈ ಜಗದಲ್ಲಿ ಬಾಳೋಣ. ಜಗದ ಸೃಷ್ಟಿಯ ಮೂಲ, ಪ್ರಕೃತಿ ಪುರುಷರ ಸಂಯೋಗದಲ್ಲಿದೆ. ಪರಮಾತ್ಮನ ಪರಾ ಮತ್ತು ಅಪರಾ ಶಕ್ತಿಗಳ ಮೂಲಕವಾಗಿ ವಿಶ್ವ ಜನಿಸಿದೆ. ಆದ್ದರಿಂದ ಪ್ರಪಂಚದ ಪ್ರತಿ ಅಣುಗಳಲ್ಲಿ ಪರಮಾತ್ಮನ ಅಂಶವಿದೆ. ಅದಕ್ಕಾಗಿಯೆ ಉಪನಿಷತ್‌ಕಾರರು "ಈಶಾವಾಸ್ಯಮಿದಂ ಸರ್ವಂ | ಯತ್ಕಿಂಚ ಜಗತ್ಯಾಂ ಜಗತ" ಎಂದಿದ್ದಾರೆ. ಸ್ಥಾವರ–ಜಂಗಮಗಳೆರಡೂ ಅವನ ಅಂಶರೂಪಗಳೇ. ಆದ್ದರಿಂದ ಇಲ್ಲಿ ಮಾಡುವ "ಸಕಲ ಸೇವೆಯೂ ಹರಿಸೇವೆ ಎನ್ನಿ" ಎಂದಿದ್ದಾರೆ ದಾಸವರ್ಯರು. ಆತ್ಮನಿಗೆ ಅವಶ್ಯಕವಾದ ಪ್ರಾಣ, ಶ್ರದ್ಧಾ, ಆಕಾಶ, ವಾಯು, ತೇಜ, ಜ್ಯೋತಿ, ನೀರು, ಪೃಥ್ವಿ, ಇಂದ್ರಿಯ, ಮನಸ್ಸು, ಅನ್ನ, ಅಗ್ನಿ, ತಪಸ್ಸು, ಮಂತ್ರ, ಗೋಲಕ, ನಾಮ ಮುಂತಾದ ಹದಿನೈದು ಕಲೆಗಳಲ್ಲಿಯೂ ಕಲಾರೂಪ ಪರಮಾತ್ಮನ ಅಂಶಗಳ ಸಾನ್ನಿಧ್ಯವಿದೆ. ಆದ್ದರಿಂದ ನಾವೆಲ್ಲರೂ ಭಾವಾದ್ವೈತ, ಶ್ರೇಯೋದ್ವೈತ, ದ್ರವ್ಯಾದ್ವೈತಗಳಿಂದ ಅವನನ್ನು ಚಿಂತಿಸಬೇಕು. ಅವನ ಸಾಕ್ಷಾತ್ಕಾರವೇ ಮಾನವ ಜೀವನದ ಸಾಫಲ್ಯ.

ಆ ಸಾಫಲ್ಯವನ್ನು ಪಡೆಯುವ ಸಾಧನಗಳಲ್ಲಿ ಕರ್ಮ, ಜ್ಞಾನ, ಸಂನ್ಯಾಸ ಎಂಬ ಮೂರು ಮಾರ್ಗಗಳನ್ನು ಜ್ಞಾನಿಗಳು ಮಾಡಿದ್ದಾರೆ. ಅದಕ್ಕಾಗಿ ಪುರಂದರದಾಸರು ಯಾವದೇ ಮಾರ್ಗದಿಂದಾದರೂ 'ದಾಳಿ ಬಾರದ ಮುನ್ನ ಧರ್ಮವ ಕೈಕೊಳ್ಳಿ' ಎಂದಿದ್ದಾರೆ. ಆದರೆ ಮಾನವ ಜೀವನದ ಮೂಲ ಒಂದೇ ಆದರೂ ಸ್ವಭಾವಜನ್ಯ ತ್ರಿಗುಣಗಳು ಅಲ್ಲಿ ಕಾಣುತ್ತಿವೆ. ಸತ್ವ, ರಜ, ತಮೋ ಗುಣಗಳು ಜೀವರಾಶಿಯಲ್ಲಿ ಉಂಟು. ಎಲ್ಲ ಜೀವರುಗಳು ಸ್ಥೂಲಶರೀರ, ಪ್ರಜಾಪತಿ ಎಂಬ ವಿರಾಟಪುರುಷನ ಅಂಶಗಳೇ. ಆದ್ದರಿಂದಲೇ ಸ್ತ್ರೀ, ಶೂದ್ರ, ವೈಶ್ಯ ಮುಂತಾದವರು ನನ್ನನ್ನು ಭಜಿಸಿದರೆ ನಿಸ್ಸಂದೇಹವಾಗಿ ಪರಗತಿಗೆ ಹೋಗುವರೆಂದು ಭಗವಂತನು ಗೀತೆಯ ಒಂಭತ್ತನೇ ಅಧ್ಯಾಯದಲ್ಲಿ "ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿಸ್ಯುಃ ಪಾಪಯೋನಯಃ | ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಂ" ಎಂದಿದ್ದಾನೆ.

ಆದರೆ ಅನಂತನ ಚಿದ್‌ರೂಪ ದರ್ಶನ, ಅಥವಾ ಸಾಕ್ಷಾತ್ಕಾರಗಳಿಗೆ ಅನೇಕ ಮಾರ್ಗಗಳಿದ್ದರೂ ಕರ್ಮಮಾರ್ಗವೇ ಶ್ರೇಷ್ಠವೆಂದು ಪ್ರಸ್ಥಾನತ್ರಯಿಗಳಲ್ಲಿ ಒಂದಾದ ಗೀತೆಯೂ ಹೇಳಿದೆ. ಆದರಂತೆ ಉಪನಿಷತ್ತು ಕೂಡ

ಸನ್ಯಾಸಯೋಗಕ್ಕಿಂತ ಕರ್ಮಯೋಗಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಟ್ಟಿದೆ.

ಹಾಗಾದರೆ ಎಂಥ ಕರ್ಮ? ಯಾವ ಕರ್ಮ? ಹೇಗೆ? ಎಂಬ ಪ್ರಶ್ನೆಗಳು ಎದುರು ನಿಲ್ಲುತ್ತಿವೆ. ಇವೆಲ್ಲಕ್ಕೂ ಗೀತೆ ಉತ್ತರರೂಪವಾಗಿದೆ. ಯಾರು ಯಾವ ರೀತಿ ಆಚರಿಸಬೇಕು ಎಂಬುದನ್ನು ಮೀಮಾಂಸೆಯ ಪೂರ್ವಪಟ್ಟವೂ ಶ್ರುತಿ, ಸ್ಮೃತಿಗಳೂ, ಗೀತೆಯೂ ಹೇಳಿದೆ. "ಕುರ್ವನ್ನೇವೇಹ ಕರ್ಮಾಣಿ" ಕಾರ್ಯ ಮಾಡುತ್ತಲೇ ಇರು. ಆದರೆ ಫಲಾಪೇಕ್ಷೆ ಬೇಡ. "ಮಾಫಲೇಷು" ಎಂದು ಗೀತಾಕಾರ ಹೇಳಿದ್ದಾನೆ. ಫಲಾಪೇಕ್ಷಿಯಾಗದಿದ್ದರೂ ಕರ್ಮದಿಂದ ದೊರೆತ ಫಲವನ್ನು ಪರರಿಗಾಗಿ ತ್ಯಜಿಸು. ಈ ತ್ಯಾಗ, ನಿಷ್ಕಾಮತೆ, ದಾನ ಇದು ಅವಶ್ಯ. ಈ ಕಾಮ ನಾಶವಾಗಲು ವ್ಯಾಪಕಪ್ರಕ್ರಿಯೆ, ಏಕಾಗ್ರ ಪ್ರಕ್ರಿಯೆ, ಸೂಕ್ಷ್ಮಪ್ರಕ್ರಿಯೆ, ವಿಶುದ್ಧಪ ಕ್ರಿಯೆಗಳನ್ನು ಸಾಧಿಸಬೇಕು. ಇವುಗಳನ್ನು ಸಾಧಿಸಲು ಆಶೆಯನ್ನು ಬಿಟ್ಟುಬಿಡಬೇಕು. ಏಕೆಂದರೆ ಆಶೆಯಲ್ಲಿ ಹೇಗೆ ಎರಡು ಭೇದಗಳಿವೆಯೊ ಹಾಗೆ ತೃಷ್ಣೆ,ಕ್ರೋಧ, ಭಯಗಳೆಂಬ ಪರಿಣಾಮಗಳು ಅದರಿಂದ ಆಗುತ್ತವೆ. ಅದಕ್ಕಾಗಿಯೇ ಗೀತೆಯಲ್ಲಿ "ಸಮದುಃಖೆ ಸುಖಾಭಾವೆ ಲಾಭಾಲಾಭೌ ಜಯಾಜಯೌ" ಎಂದು ಹೇಳಿದೆ. ಎಲ್ಲ ದುಃಖ–ಸುಖಗಳು ಸರಿಯೆಂದು ಭಾವಿಸು. ಅಂದ ಮೇಲೆ ಮಾನವನು ಸ್ಥಿತಪ್ರಜ್ಞನಾದರೆ ಮಾತ್ರ ಮಾನವಾತೀತನಾಗಬಲ್ಲ. ಆಗ ಅನನ್ಯತೆ ಸಮಾನತೆಯನ್ನು ಕಾಯುತ್ತಿದೆ. ಸಾಧನ ಸಂಪತ್ತು, ವಿವೇಕ, ವೈರಾಗ್ಯ, ಷಟ್‌ಸಂಪತ್ತಿ, ಮುಮುಕ್ಷುತ್ವ ಸ್ಥಿತಪ್ರಜ್ಞನಾದವನಿಗೆ ಅವಶ್ಯವೆಂದು ಶಂಕರಾಚಾರ್ಯರು ಅಂದಿದ್ದಾರೆ. ಜೈನರು ಸಮ್ಯಕ್‌ದರ್ಶನ, ಸಮ್ಯಕ್‌ಜ್ಞಾನ, ಸಮ್ಯಕ್‌ಚಾರಿತ್ರ್ಯ ಎಂಬ ರತ್ನತ್ರಯಗಳು ಅವಶ್ಯವೆಂದಿದ್ದಾರೆ. ಸ್ಥಿತಪ್ರಜ್ಞನಾದವನಲ್ಲಿ ಶಮ-ದಮ ಅವಶ್ಯ. ಸುಖ-ದುಃಖಗಳಲ್ಲಿ ಉದ್ವೇಗರಹಿತ ಮನವುಳ್ಳವನಾಗಬೇಕು. ಇಂದ್ರಿಯ ಸುಖದಿಂದ ಅಲಿಪ್ತನಾಗಬೇಕು. ಆಗ ಅವನು ಚಿತ್ತಕ್ಲೇಶ ಮದದಿಂದ ದೂರವಾಗಿ "ವಿಭೂತಿ" ಆಗುವನು. ಅವನು ಆತ್ಮಕಾಮನಾಗುವನು. ಆದ್ದರಿಂದ ನಿಷ್ಕಾಮಕರ್ಮ ಅವಶ್ಯ. ಅಂದರೆ ನಾವು ಮಾಡುವ ಪ್ರತಿಯೊಂದು ಕೆಲಸದ ಫಲ ನನಗಾಗಿಯೆಷ್ಟು ಅವಶ್ಯವೊ ಹೆರವರಿಗಾಗಿಯೂ ಅಷ್ಟೇ ಅವಶ್ಯ ಎಂದು ಭಾವಿಸಿ ಪರರಿಗಾಗಿ ದುಡಿಯಿರಿ. ವಿಶ್ವಜನತೆಗಾಗಿ ದುಡಿಯಬೇಕಾಗಿದ್ದರಿಂದ ಜಡತೆಯನ್ನು ಓಡಿಸಿರಿ. ಪ್ರತಿಪ್ರಾಣಿಗೂ ಸುಷುಮ್ನ ಕಾಲುವೆ, ಅದರ ಪಾರ್ಶ್ವಗಳಲ್ಲಿ

ಇಡಾ ಪಿಂಗಳಗಳು ಇರುತ್ತವೆ. ಆದರೆ ದ್ವಂದ್ವಾತೀತ ಆಪ್ತಕಾಮನಲ್ಲಿ ಈ ಸುಷುಮ್ನಾ ಕಾಲುವೆ ಮೇಲೆ ತೆರೆದಿರುತ್ತದೆ. ಆಗ ಅವನು ಇಂದ್ರಿಯಾತೀತ ನಾಗುವನು. ಆ ಮಾನವನು ಮಾನವಾತೀತನಾಗುವನು. ಆದ್ದರಿಂದ ಪತಂಜಲಿಯು "ಅಸ್ತೇಯ ಪ್ರತಿಷ್ಠಾಯಾಂ ಸರ್ವೋ ರತ್ನೋಪಸ್ಥಾನಮ್" ಎಂದಿದ್ದಾರೆ. ಹೀಗೆ ಮಾನವಾತೀತನಾದವನಲ್ಲಿ ಮೂರೂ ವಿಕಾರಗಳ ಮೇಲೆ ಹಿಡಿತವಿರುತ್ತದೆ. ಆಗ ಅವನಿಗೆ ಭೂತ ಭವಿಷ್ಯತ್ತುಗಳ ಜ್ಞಾನ ಬರುತ್ತದೆ.

ಬಂಧುಗಳೇ, ಭಾಷಣ ಉದ್ದವಾಗಹತ್ತಿದೆ, ಕ್ಷಮಿಸಿರಿ. ಇಂದು ನಮಗೆ ಆಪ್ತಕಾಮರೂ ಸ್ಥಿತಪ್ರಜ್ಞರೂ ಬೇಕು. "ತೇನ ತ್ಯಕ್ತೇನ ಭುಂಜೀಥಾ" ದಾನ ಮಾಡಿ ಉಳಿದದ್ದರಲ್ಲಿ ಉಣ್ಣುವ. ತನ್ನ ಅನ್ನವನ್ನು ಪರರಿಗೆ ಕೊಡುವ ಪಾರ ಮಾರ್ಥಿಗಳು ಬೇಕು. "ಆಚಾರ್ಯದೇವೋ ಭವ" ಎಂಬುವ ಶಿಷ್ಯಕೋಟಿ ಬೇಕು. "ಮಾತೃದೇವೋ ಭವ" ಎನ್ನುವ ಪುತ್ರರತ್ನರು ಬೇಕು. "ಸತ್ಯಂ ವದ" ಎಂದು ಸಾರುವ ಸಾರ್ವಜನಿಕರು ಬೇಕು. ಬಂಧುಗಳೇ, ಬದುಕಿ ಬಾಳುವ, ಬಾಳುವಂತೆ ಮಾಡುವ ಧರ್ಮಕ್ಕೆ ಜೈ ಅನ್ನಿರಿ. ದಾಸರ ಉಕ್ತಿಗಳು ಮಾನವನಿಗಾಗಿಯೇ ನಿಂತಿವೆ. "ಮಾನವ ಜನ್ಮ ದೊಡ್ಡದೊ ಮನುಜಾ ಹಾನಿ ಮಾಡಬೇಡ" ಎಂದು ಪುರಂದರದಾಸರು ಸಾರಿದ್ದಾರೆ. ಅದಕ್ಕಾಗಿ ನಾವೆಲ್ಲರೂ ಸ್ಥಿತಪ್ರಜ್ಞರಾಗೋಣ. ನವಮನ್ವಂತರ ನಿರ್ಮಿಸೋಣ. ಕೊನೆಯ ದಾಗಿ ಉಪನಿಷತ್ತಿನ ಶ್ಲೋಕ ಅಂದು ಮುಗಿಸುತ್ತೇನೆ. ಬಂಧುಗಳೇ, "ತಮಸೊ ಮಾಂ ಜ್ಯೋತಿರ್ಗಮಯ । ಮೃತ್ಯೋರ್ಮಾಂ ಅಮೃತಂ ಗಮಯ । ಸರ್ವೇ ಜನಾಃ ಸುಖಿನೋ ಭವಂತು । ಓಂ ಶಾಂತಿಃ ಶಾಂತಿಃ ಶಾಂತಿಃ । ಸಹನಾವವತು ಸಹನೌ ಭುನಕ್ತು ಸಹ ವೀರ್ಯಂ ಕರವಾವಹೆ । ತೇಜಸ್ವಿನಾವಧೀತಮಸ್ತು । ಓಂ ಶಾಂತಿಃ ಪುಷ್ಟಿಃ ತುಷ್ಟಿಶ್ಚಾಸ್ತು" ಎಂದು ನುಡಿದು ಭಟ್ಟರು ಭಾಷಣ ಮುಗಿಸಿ ದಾಗ ಜನ ಇನ್ನೂ ಆ ರಸವಿಶ್ವದಲ್ಲಿಯೇ ಇದ್ದರು. ದೇವದೂತನ ವಾಣಿ ಯಂತೆ ನೆರೆದವರಿಗೆಲ್ಲ ಭಾಸವಾಯಿತು. ಭಟ್ಟರ ಪಾಂಡಿತ್ಯಕ್ಕೆ ಸಭಿಕರೆಲ್ಲ ತಲೆದೂಗಿದರು.

ಕಾರ್ಯಕ್ರಮದ ಪಟ್ಟಿಯಲ್ಲಿಯ ಕೆಲಸ ಮುಗಿಯಿತು. ವಂದೇ ಮಾತರಂ ಗೀತೆಯಿಂದ ಸಮಾಪ್ತವಾಯಿತು. ರಾತ್ರಿ ಸಂಗೀತ ಕಚೇರಿ ನಡೆಯಿತು.

ಮರುದಿನ ಮುಂಜಾನೆ ಯಥಾವತ್ ಕಾರ್ಯಕ್ರಮ ಆರಂಭವಾಯಿತು. ಗಯೆಯಿಂದ ಬರುವವರಿದ್ದ ಬೌದ್ಧ ಭಿಕ್ಷು ಬರುವದಾಗುವದಿಲ್ಲವೆಂದು ಕಳಿಸಿದ ತಂತಿಯನ್ನು ಅಧ್ಯಕ್ಷರು ಓದಿ ಧಾರವಾಡದಿಂದ ಬಂದ ವಿಭೂತಿಪುರುಷರೂ ದಾಸೋಹ ಮೂರ್ತಿಗಳೂ ಆದ ಜಗದ್ಗುರುಗಳನ್ನು ಭಾಷಣ ಮಾಡಲು ವಿನಂತಿಸಿದರು. ಸ್ವಾಮೀಜಿಯವರು ಧ್ವನಿವಾಹಕದ ಮುಂದೆ ನಿಂತರು. ಆಹಾ! ನಿಜವಾಗಿಯೂ ವಿವೇಕಾನಂದರ ಪ್ರತಿರೂಪವೇ ಅವರದು. ಜ್ಞಾನತೇಜ ದೊಡನೆ ಮಿಲನವಾಗಿದ್ದ ಅವರ ಜಿತೇಂದ್ರಿಯತ್ವದ ಪ್ರಭೆ ಸಮ್ಮೇಲನವನ್ನೆಲ್ಲ ಬೆಳಗಹತ್ತಿತು. ಸುರುವಾಯಿತು ಅವರ ಗಂಗಾಪ್ರವಾಹ.

"ಅಧ್ಯಕ್ಷರೇ, ಈ ಸಮ್ಮೇಲನದ ಅಧ್ವರ್ಯು ಅನಂತರಾಯರೆ, ಮಾತೆಯರೆ, ಮತ್ತು ಮಕ್ಕಳೇ, ನನಗೆ ಈ ಅಪೂರ್ವ ಯೋಗ ಒದಗಿಸಿ ಕೊಟ್ಟದ್ದಕ್ಕಾಗಿ ಮೊದಲು ನನ್ನ ಸಂತೋಷಪೂರಿತ ವಂದನೆ ಅರ್ಪಿಸುವೆ. ನನಗೆ ಮಾತಾಡಲು ಹೇಳಿದ ವಿಷಯ "ವೀರಶೈವ ಧರ್ಮ". ವೀರಶೈವ ಧರ್ಮ ವಿಶ್ವಧರ್ಮ. ಜನಸಾಮಾನ್ಯರ ಧರ್ಮ. ಅದು ಬಡವರ ಧರ್ಮ, ಸಿರಿವಂತರ ಧರ್ಮವಲ್ಲ ಎಂಬುದನ್ನು ಹೇಳುವ ಅವಶ್ಯಕತೆ ಇಲ್ಲವಲ್ಲವೆ ? ಸತ್ಯ-ಸಂಕಲ್ಪತೆಗಳನ್ನು ಸಮತುಲನೆ ಮಾಡಿ ಪುರುಷನನ್ನು ಪರಶಿವನಲ್ಲಿ ತಾದಾತ್ಮ್ಯಗೊಳಿಸುತ್ತದೆ. ಪ್ರಪಂಚದಲ್ಲಿ ಮೂಲವಾಗಿ ಮಾನವನಿಗೆ ಅವಶ್ಯವಾದವು ಶಿವ,ಲಿಂಗ,ಜಂಗಮ. ಯಾಕಂದರೆ ವಿಶ್ವಸೃಷ್ಟಿಗೆ ಮೂಲ ಕಾರಣ ಆ ಪರಶಿವನೊಬ್ಬನೇ. ಸೃಷ್ಟಿತ್ವ ಅವನೊಬ್ಬನಲ್ಲಿಯೇ ಇದೆ. ತದನಂತರ ಪರಶಿವನ ಸದ್ರೂಪ ಚಿದ್ರೂಪ ತೋರಿಸುವದೇ ಲಿಂಗ. ಮಾನವರೆಲ್ಲರೂ ಅವನಿಂದ ಬಂದ ಅಂಶ ಎಂದು ಸಾರಿ ಹೇಳಲು 'ಲಿಂಗ' ಅವಶ್ಯ. ಮುಂದೆ ಪುರುಷ ಮಾನವನಾಗಿ ಬಾಳಲು ಅವಶ್ಯವಾದ ಇನ್ನೊಬ್ಬ ವ್ಯಕ್ತಿ ಅದೇ 'ಜಂಗಮ'. ಪರಶಿವನಲ್ಲಿ ತಾದಾತ್ಮ್ಯ ಹೊಂದಲು ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ, ಪ್ರಸಾದಪರಿಚಯ, ನವಲಿಂಗಸಕೀಲ, ಏಕೋತ್ತರ ಶತಸ್ಥಲಗಳು ಅನಿವಾರ್ಯ. ಶಿವನ ರೂಪ ಲಿಂಗ. ಆದ್ದರಿಂದ ಲಿಂಗಾಂಗ ಸಮೀಕರಣ ಸಾಧ್ಯ ಮಾಡಬೇಕು.

ಈ ಉಳಿದ ಜಾತಿಗಳಂತೆ ಕೇವಲ ಹುಟ್ಟಿನಿಂದಲೇ ಧರ್ಮಮುದ್ರೆಯೊತ್ತುವ ಧರ್ಮವಿದಲ್ಲ. ಲಿಂಗಧರಿಸಿ ಆಚಾರ ಅನುಷ್ಠಾನಗಳನ್ನು ಅನುಸರಿಸುವವರೆಲ್ಲ ಲಿಂಗವಂತರು. ಲಿಂಗಾಂಗ ಸಾಮರಸ್ಯ ಎಲ್ಲರೂ ಪಡೆಯಬಹುದು.

ಎಲ್ಲ ಜಾತಿಯವರಿಗೂ ಭಕ್ತಿಭಾಂಡಾರಿ ಬಸವಣ್ಣನವರು ತಮ್ಮ ಮತದ ದ್ವಾರವನ್ನು ಮುಕ್ತವಾಗಿಟ್ಟರು. ಮಾದರ ಮಾಚಯ್ಯ, ಹಡಪದ ಹವಳಯ್ಯರಲ್ಲದೇ ಇನ್ನೂ ಅನೇಕ ಶಿಷ್ಯಕೋಟಿಯನ್ನು ತಮ್ಮೆಡೆಗೆ ಕರಕೊಂಡರು. ತತ್ವ ಒಪ್ಪಿ ಆಚಾರಿಯಾದರೆ ಮುಗಿಯಿತು. ಸಮಾಜದ ಧರ್ಮ ಇದು ಇದರಲ್ಲಿ ಏಕತ್ವ ಇದೆ; ಅನೇಕತ್ವ ಇಲ್ಲ. ಸರಿಸಮಾನತೆ ಸಹೋದರತೆಗಳೇ ಈ ಧರ್ಮದ ಆಳತೆಗೋಲುಗಳು. ಆದರೆ.ಈ ಧರ್ಮವನ್ನು ಸೇರಲು ಮಾನವನು ಸಾಧನಿಯಾಗಲೇ ಬೇಕು. ತನು–ಮನಗಳನ್ನು ತೊಳೆದುಕೊಳ್ಳಲೇ ಬೇಕು. ಆಶೆಯ ಭೂತ ಓಡಿಸಿ ಆತ್ಮವಿಕಾಸ ಮಾಡಿಕೊಳ್ಳಲೇ ಬೇಕು. ದೇಹ-ಮನಗಳೆಡನ್ನೂ ಪರಶಿವನಿಗೆ ಅರ್ಪಿಸಬೇಕು. ಆದಕಾಗಿಯೇ ಬಸವಣ್ಣನವರು "ಸಂಸಾರ ಎಂಬುದೊಂದು ಗಾಳಿಯ ಸೊಡರು, ಸಿರಿ ಎಂಬುದೊಂದು ಸಂತೆಯ ಮಂದಿ" ಎಂಬ ತತ್ವವನ್ನು ವೀರಶೈವರಿಗೆ ತಿಳುಹಿದ್ದಾರೆ. ಜೀವನಿಗೆ ಆರು ಹಂತಗಳು ಉಂಟು. ಅದರಂತೆ ಈ ಧರ್ಮವನ್ನು ಮೊರೆಹೋಗುವವರಿಗೆ ಕೆಲವು ಪ್ರವೇಶ ಪರೀಕ್ಷೆಗಳೂ ಉಂಟು. ಸಾಧಕನ ಮಾರ್ಗದಲ್ಲಿ ಭಕ್ತಸ್ಥಲ, ಮಹೇಶಸ್ಥಲ, ಪ್ರಸಾದಿಸ್ಥಲ, ಪ್ರಾಣಲಿಂಗಿಸ್ಥಲ, ಶರಣಸ್ಥಲ, ಐಕ್ಯಸ್ಥಲಗಳಿವೆ. ಇವುಗಳನ್ನು ದಾಟಿದರೆ ಲಿಂಗಾಂಗ ಸಾಮರಸ್ಯ ಹೊಂದಿ ಪರಮಾತ್ಮನ ಸಾಕ್ಷಾತ್ಕಾರ ಸನಿಹವಾಗುವದು. ಆಗ ಅವನು ಪ್ರಾಣಲಿಂಗಿ ಆಗಬಹುದು. ಆ ಪ್ರಾಣಲಿಂಗಿತ್ವವನ್ನು ದೊರಕಿಸಲು ಸದಾಚಾರ, ಗಣಾಚಾರ, ನಿತ್ಯಾಚಾರ, ಶಿವಾಚಾರ, ಲಿಂಗಾಚಾರಗಳು ದಾರಿ ದೀಪಗಳು.

ಬಸವೇಶ್ವರರ ಬಳಗ ವೀರಶೈವ ಧರ್ಮವನ್ನು ವಿಶಾಲ ಮಾಡಿತು. ಸಮಾಜದಲ್ಲಿ ನಡೆದು ಬಂದ ಅನೀತಿ ಅತ್ಯಾಚಾರಗಳಿಗೆ ಶೈವ ಮತದಿಂದ ಅಗ್ನಿಸಂಸ್ಕಾರ ಮಾಡಿದರು. " ಜೀವನದ ಸಮಸ್ಯೆಗಳೆಲ್ಲಕ್ಕೂ ತಮ್ಮ ವಚನಗಳಲ್ಲಿ ಮಾರ್ಗ ತೋರಿಸಿದರು. " ಸಕಲ ಜೀವಾತ್ಮರಿಗೆಲ್ಲ ಲೇಸ ಬಯಸುವರೆಲ್ಲ ಕುಲಜರು " ಎಂದು ಕರೆದರು ಶರಣರು. " ನಾನು ಘನ ತಾನು ಘನವೆಂಬ ಹಿರಿಯರುಂಟೇ ಜಗದೊಳಗೆ ಹಿರಿಯ ಕಿರಿದೆಂಬ ಶಬ್ದವಡಗಿದರೆ ಆತನೇ ಶರಣ ಗುಹೇಶ್ವರ " ಎಂಬ ವಚನವನ್ನು ಇನ್ನೊಬ್ಬ ಶರಣರು ಹಾಡಿದರು. ಶರಣನಾಗಲು ಆಚಾರ ವಿಚಾರ ಶುದ್ಧವಿರಬೇಕು. ಅದಕಾಗಿಯೇ ಶರಣರೊಬ್ಬರು ತಮ್ಮ ವಚನದಲ್ಲಿ " ನಡೆನುಡಿ ಶುದ್ಧವಿಲ್ಲದವರಲ್ಲಿ ಇರಲೊಲ್ಲನು ನೋಡಾ ಅಖಂಡೇ

ಶ್ವರ" ಎಂದಿದ್ದಾರೆ. ಬರುವ ಸುಖ-ದುಃಖ ಆತನವು ಎನ್ನಿರಿ ಎಂಬುದೇ ಶರಣರ ಸಾರ. 'ಸರ್ವಾರ್ಪಣ' ಮಾಡುವದೇ ವೀರಶೈವ ಧರ್ಮದ ಮೂಲ. ಅದಕ್ಕಾಗಿ ಬಸವಣ್ಣನವರು "ಎನ್ನ ಯೋಗಕ್ಷೇಮ ನಿಮ್ಮದಯ್ಯ. ಎನ್ನ ಹಾನಿ ವೃದ್ಧಿ ನಿಮ್ಮದಯ್ಯ. ಎನ್ನ ಮಾನಾಪಮಾನ ನಿಮ್ಮದಯ್ಯ ಕೂಡಲ ಸಂಗಮ" ಎಂದಿದ್ದಾರೆ. ಇಂಥ ಉದಾತ್ತ ವಿಚಾರವಿದ್ದವನು ಮಾತ್ರ ವೀರಶೈವ.

ಈ ಧರ್ಮದಲ್ಲಿ ಸ್ತ್ರೀಪುರುಷರಲ್ಲಿ ಭೇದವೆಣಿಸಲಾಗದು. ಅನುಭವ ಮಂಟಪ ದಲ್ಲಿ ನಡೆಯುತ್ತಿದ್ದ ಮಹಾದೇವಿಯಕ್ಕನ ವಾಕ್ಯಾರ್ಥ ಪ್ರದೀಪವು ನರನಾರಿ ಯರ ಸಮತೆಯನ್ನು ತೋರಿಸುತ್ತಿದೆ. "ಪಂಚೇಂದ್ರಿಯ ಧಾತುಗಳಿಂದ ವಿಕಳ ನಾಗದವ, ಮನದ ವಿಕಾರದಿಂದ ಮತಿಗೆಡದವ, ಧನದ ವಿಕಾರದಿಂದ ಮತಿಗೆಡ ದವನೇ ಶರಣ, ವೀರಶೈವ" ಎಂದು ವಚನ ಹೇಳಿದೆ. ಕೇವಲ ಡಾಂಭಿಕ ನಾಗಿ ನಾನು ವೀರಶೈವ ಎಂದರೆ ಆಗಬಹುದೆ? ಧರ್ಮವನ್ನು ಆಚರಿಸುವ ವರಿಗೆ ಹೆರವರ ಗೊಡವೆ ಬೇಡ. ಇಂದು ಜಾತೀಯ ವಾದ ಎದ್ದಿರುವದು ಸಾಮಾನ್ಯ ಮನುಷ್ಯರಿಂದಲ್ಲ, ನನ್ನಂಥ ಕಾವಿ ಬಟ್ಟೆ ಧರಿಸಿದ ಸ್ವಾರ್ಥ ಸಾಧಿ ಸಲು ಮಠಗಳನ್ನು ಸ್ಥಾಪಿಸಿ, ಅದರ ಹಣದಿಂದ ಮನೆ–ಮಹಲುಗಳನ್ನು ಕಟ್ಟಿಸಿ ಐಹಿಕ ಸುಖಲೋಲುಪರಾದ ಸನ್ಯಾಸಿಗಳಿಂದ. ತಿಳಿದು ನೋಡಿದರೆ ಕಾಣು ವದೆಲ್ಲ ಬರಿ ಶೂನ್ಯ.

ಇಂಥ ಸಮ್ಮೇಲನಗಳು ಪ್ರತಿ ವರುಷವೂ ನಡೆಯಲಿ. ಇದರ ಬೆನ್ನೆ ಲುವಾಗಿ ನಿಂತ ಭಯ್ಯಾ ಮತ್ತು ಅನಂತರಿಗೆ ಪರಶಿವನು ಆಯುಷ್ಯ, ಶ್ರೇಯಸ್ಸು ನೀಡಲಿ. ಸರ್ವಂ ಮಂಗಳಂ ಭದ್ರಂ ಶುಭಂ" ಎಂದು ಮುಗಿಸಿದರು. ಅಮೃತಧಾರೆಯಂಥ ಸ್ವಾಮೀಜಿಯವರ ಭಾಷಣವು ಎರಡೂವರೆ ತಾಸಾದರೂ ಜನರಿಗೆ ಇನ್ನೂ ಬೇಕೆನಿಸಿತು.

ಕೊನೆಯದಾಗಿ ಅಧ್ಯಕ್ಷರು ಸಮಾರೋಪ ಭಾಷಣ ಸುರುವು ಮಾಡಿ ದರು. ಮೊದಲು 'ಗ್ರಂಥಸಾಹೇಬ'ದಲ್ಲಿಯ ಅಮರ ವಾಕ್ಯಗಳ ಸಂದೇಶ ತಿಳುಹಿ, ಎಲ್ಲ ಭಾಷಣಕಾರರ ಭಾಷಣ ಸಾರವನ್ನು ತಿಳಿಸಿದರು. "ಕಾಲಾನು ಕ್ರಮದಿಂದ ನಿಸರ್ಗವೇ ಬದಲಾಗುವಾಗ ಧರ್ಮ ಆಗದಿರಬಹುದೆ? ಹಿಂದಿನ ಕಾಲದ ವಾತಾವರಣಕ್ಕೆ ಸಮಾಜಸ್ವಾಸ್ಥ್ಯಕ್ಕೆ ಅನುಕೂಲವಾದ ಧರ್ಮ ಬೆಳೆ

ಯಿತು. ಅದು ಇಂದು ಸತ್ಯವಾಗಬಹುದೆ ? ಆದರೆ ಕೆಲವು ತತ್ವಗಳು ಮಾತ್ರ ಅನಂತಸತ್ಯ. " ಸತ್ಯಮೇವ ಜಯತೇ " ಇದು ಚಿರಕಾಲವು ನಡೆಯುವ ಧರ್ಮ. ಭಕ್ತರನ್ನು ಸ್ಥಿಮಿತದಲ್ಲಿಡಲು, ತನುಮನಗಳ ವಿಕಾರದಿಂದ ದೂರ ವಿಡಲು ಒಂದು ದೇವನನ್ನು ಕಲ್ಪಿಸಿ, ಅವನ ಸಾಕ್ಷಾತ್ಕಾರಕ್ಕಾಗಿ ಸಾಧನಗಳನ್ನು ಹೇಳಿದರು. ಏಕಾಗ್ರತೆ ಅಧಿಕವಾಗುವದಕ್ಕೆ ಇದನ್ನೇ ನಂಬು. ಅನ್ಯರದು ಅಸತ್ಯ ಎಂಬ ಮಾತುಗಳನ್ನೂ ಹೇಳಿದರು. ಆದರೆ ಅದರಲ್ಲಿ ಅಡಗಿದ ಉದ್ದೇಶ ಮಾತ್ರ ಹಾಗೇ ಉಳಿಯಿತು. ನಾನು ಹೆಚ್ಚು, ನನ್ನದು ಹೆಚ್ಚು ಎಂಬ ಅಹಂಕಾರ ಅಧಿಕವಾಯಿತು. ಇಂದು ಕಾಣುವ ಜಾತೀಯ ನಗ್ನತೆಗೆ ಈ ' ನಾನು ನನ್ನದು ' ಎಂಬ ಅಹಂಕಾರವೇ ಕಾರಣ. ಅವರವರ ಮಾರ್ಗದಲ್ಲಿ ಅವರೆಲ್ಲರೂ ದೊಡ್ಡವರು. ಯಾವ ಧರ್ಮವೂ ಅಗ್ರಾಹ್ಯವಲ್ಲ. ತಿಳಿದು, ತೊಳೆದು, ತೋಡಿ ನೋಡಿರಿ. ಇವೆಲ್ಲ ಧರ್ಮಗಳು ಮನೆ-ಮಠಗಳ ಧರ್ಮಗಳು. ಇಂದು ಇವುಗಳಲ್ಲಿ ಅಡಕವಾದ ತತ್ವದ ಮೇಲೆ ನಿಲ್ಲುವ ವಿಶ್ವಧರ್ಮ, ಸರ್ವರ ಧರ್ಮ, ಸಮತಾಧರ್ಮ, ಆನ್ನದ ಧರ್ಮ ಬೇಕಾಗಿದೆ. ಮಾನವನನ್ನು ಅಳೆಯುವ ಕೋಲು ಇನ್ನು ಮೇಲೆ ಜಾತಿ ಧರ್ಮಗಳಾಗಬಾರದು. ಆದರೆ ಆ ಧರ್ಮದ ಮೂಲ ತತ್ವ ಗಳಾಗಬೇಕು. ಮಾನವನನ್ನು ನೋಡುವ ದೃಷ್ಟಿ ಜಾತೀಯ ದೃಷ್ಟಿ ಆಗ ಬಾರದು, ಧರ್ಮದೃಷ್ಟಿ ಆಗಬೇಕು. ಗೆಳೆತನ ಮಾಡಲು ಧರ್ಮವು ಬೇಕೆ ವಿನಃ ಜಾತೀಯತೆ ಬೇಡ. ವಿಶ್ವಕಲ್ಯಾಣ, ಶಾಂತಿ ಸಮೃದ್ಧತೆ, ಸಮತೆ, ಸ್ವಾತಂ ತ್ರ್ಯತೆ ಇವು ಸ್ಥಿರವಾಗಬೇಕಾದರೆ ಧರ್ಮಧರ್ಮಗಳಲ್ಲಿ ಸಾಮರಸ್ಯ ಬೇಕು. ಮಾನ ವನು ಮಾನವನಾಗಿ ಬಾಳಿ ಬದುಕಿ, ಹೆರವರನ್ನೂ ಬಾಳುವಂತೆ ಮಾಡಬೇಕಾ ದರೆ ಧರ್ಮದೃಷ್ಟಿ, ಧರ್ಮಸೃಷ್ಟಿ, ಧರ್ಮಮಾರ್ಗ ಬೇಕು " ಎಂದು ಉಸುರಿ ಭಾಷಣ ಪೂರ್ತಿಮಾಡಿದರು.

ಕಮಲಾಕರರಾಯರು ಆಭಾರ ಮನ್ನಿಸಿದರು. ಕೂಡಲೆ ಅನಂತ ಇಂದಿ ನಿಂದ ಇಲ್ಲಿ ಒಂದು ದವಾಖಾನೆ ಸುರುವಾಗುವದೆಂದೂ ಡಾ. ದಾದಾರೇ ಅದರ ಚಾಲಕರೆಂದೂ ಹೇಳಿದನು. ಜನರೆಲ್ಲ ಚಪ್ಪಾಳೆಯಿಕ್ಕಿ ಕೇಕೆ ಹೊಡೆದರು.

' ಶಾಂತಿ ಸಂಘ 'ಗಳನ್ನು ಎಲ್ಲ ಕಡೆಗಳಲ್ಲಿ ಸ್ಥಾಪಿಸಬೇಕೆಂದು ಸಮ್ಮೇ ಲನದಲ್ಲಿ ನಿರ್ಣಯವಾಯಿತು. ಮುಂದಿನ ವರುಷವೇ ಅಖಿಲಭಾರತ ಶಾಂತಿ ಸಮ್ಮೇಲನ ಧಾರವಾಡದಲ್ಲಿ ನಡೆಯಬೇಕೆಂದು ಸ್ವಾಮೀಜಿಯವರು ಹಟ

ಹಿಡಿದರು. ಡಾ. ಫೆಡ್ರಿಕ್ಸರು ಮದ್ರಾಸಿನಲ್ಲಿ ನಡೆಯಲಿ ಎಂದರು. ಇನ್ನೊಮ್ಮೆ ವಿಚಾರಿಸೋಣವೆಂದು ಅನಂತ ಉತ್ತರ ಕೊಟ್ಟ. ಬೀದರಿನಲ್ಲಿ ಶಾಂತಿಸಂಘಗಳ ಮುಖ್ಯ ಕಚೇರಿ ಸದ್ಯ ಇರಬೇಕೆಂಬ ತೀರ್ಮಾನವೂ ಆಯಿತು.

ಸಮ್ಮೇಲನ ಸಂದು ಆಗಲೇ ಕೆಲ ದಿನಗಳಾಗಿದ್ದವು. ಅನಂತನಿಗೆ ಕಲಬುರ್ಗಿಗೆ ವರ್ಗವಾಗಿದ್ದರಿಂದ ಸರೋಜಳ ಸಂಗಡ ಹೊರಟ. ಸರೋಜಳ ಸಾಕುತಂದೆ ಪ್ರೊಫೆಸರರೂ ಅವಳ ಮಾವನೂ ವಿಷಣ್ಣವದನರಾಗಿ ಧಾರವಾಡಕ್ಕೆ ನಡೆದರು. ಸ್ವಾಮೀಜಿಯವರು ಹೈದ್ರಾಬಾದಿಗೆ ಹೋದರು. ಡಾ. ಫೆಡ್ರಿಕ್ಸರು ಬೇಗನೇ ಬೀದರಿಗೆ ಬಂದು ನೆಲೆಸುವದಾಗಿ ದಾದಾರಿಗೆ ವಚನಕೊಟ್ಟು ಮದ್ರಾಸಿಗೆ ಹೋದರು. ವಾಣೀವಿಹಾರದಲ್ಲಿ 'ಶಾಂತಿ' ಸಂಘದ ಶಾಖೆಯನ್ನು ತೆರೆಯಲು ಭಟ್ಟರು ಬಂದ ಬಳಗದೊಂದಿಗೆ ಕೋಲಳ್ಳಿಗೆ ನಡೆದರು.

ಬೀದರಿನಲ್ಲಿ ಶಾಂತಿಸಂಘದ ಕಚೇರಿಗಾಗಿ ಒಂದು ಮನೆಯೂ ಖಾಜೀ ಸಾಹೇಬರವರಿಂದ ದಾನವಾಗಿ ಕೊಡಲ್ಪಟ್ಟಿತು. ದಿನದಿನಕ್ಕೆ ಸಂಘವು ಹೊಸ ಹೊಸ ರೂಪ ತಾಳಹತ್ತಿತು. ಕೆಲವೇ ದಿನಗಳಲ್ಲಿ ವಾಚನಾಲಯ ಕಾಣಿಸಿಕೊಂಡಿತು. ಡಾ. ಫೆಡ್ರಿಕ್ಸರು ಸಾವಿರ ರೂಪಾಯಿ ಬೆಲೆಬಾಳುವ ಪುಸ್ತಕಗಳನ್ನು ಕಳಿಸಿದರು.

ದಾದಾರ ನೇತೃತ್ವದಲ್ಲಿ ನಡೆಯುವ ದವಾಖಾನೆ ನಾಡಿನ ನಾಲ್ಕೂ ನಿಟ್ಟಿನಲ್ಲಿ ಹೆಸರಾಯಿತು. ದೂರ ದೂರದಿಂದ ರೋಗಿಗಳು ಬರಹತ್ತಿದರು. ಕಟ್ಟಡದ ಫಂಡು ಬೆಳೆಯುಹತ್ತಿತು.

ಅನಂತ ಒಮ್ಮೆ ಬಂದೂ ಹೋದ. ಎಂಟು ದಿನಕ್ಕೊಮ್ಮೆ ಅವನಿಗೆ ಬೀದರಿನ ಸಂಘದ ಬೆಳವಣಿಗೆಯ ರಿಪೋರ್ಟು ಹೋಗುತ್ತಲಿತ್ತು. ಕಲಬುರ್ಗಿಯಲ್ಲಿಯೂ ಅನಂತ ಜನತೆಗೆ ಬೆಲ್ಲವಾಗಿದ್ದರಿಂದ ಸಿರಿವಂತರು ದವಾಖಾನೆ ಫಂಡಿಗೆ ಅನಂತನ ಕೈಯಲ್ಲಿ ಹಣ ಕೊಟ್ಟರು. ಐದು ಸಾವಿರದ ಚಕ್ಕೂ ಅನಂತನಿಂದ ಬಂದಿತು. ಬಂದ ಹಣದಿಂದ ದವಾಖಾನೆ ಆಧುನಿಕ ಸಾಧನ ಸಾಮಗ್ರಿಗಳನ್ನು ಕಂಡಿತು. ಪರ್ಣಕುಟಿಯಲ್ಲಿ ಉದಯಿಸಿದ್ದ ಋಗ್ಣಾಲಯವು ಎಂಟೇ ತಿಂಗಳಲ್ಲಿ ಭವ್ಯಭವನದಲ್ಲಿ ನಿಂತಿತು. ದವಾಖಾನೆಯ ಕಟ್ಟಡ ಇನ್ನೂ ನಡದೇ ಇತ್ತು.

ಒಮ್ಮೆಲೇ ಒಂದು ರಾತ್ರಿ ದಾದಾ ಭಯ್ಯಾನನ್ನು ಕರೆದು, "ಭಯ್ಯಾ, ಪ್ರಾಥಮಿಕ ಶಾಲೆ ಪ್ರಾರಂಭ ಮಾಡಿದರೆ ಹೇಗೆ?" ಅಂದ. ಭಯ್ಯಾ "ಯಾಕೆ ಬ್ಯಾಡ?" ಎಂದ. ಮರುದಿನ ಊರಲ್ಲಿಯ ಪ್ರಮುಖರೊಡನೆ ಚರ್ಚೆಯೂ ಆಯಿತು. ಅನಂತನ ಅಪ್ಪಣೆ ಕೇಳಲು ಪತ್ರ ಬರೆದದ್ದೂ ಆಯಿತು. ಎಲ್ಲೆಡೆಗೂ ದಾದಾ, ಭಯ್ಯಾರ ವಿಚಾರಕ್ಕೆ ಸ್ವಾಗತ.

ಜಿಲ್ಲೆಯ ಶಿಕ್ಷಣಾಧಿಕಾರಿಗಳ ಹಸ್ತದಿಂದ ಆರಂಭವಾಯಿತು ಪ್ರಾಥಮಿಕ ಶಾಲೆ. ನವಕರಿ ಬಿಟ್ಟ ಕರೀಮನೂ ಭಯ್ಯಾನ ಸಂಗಡ ಮಾಸ್ತರನಾದ. ದಿನ ದಿನಕ್ಕೆ ವಿದ್ಯಾರ್ಥಿಗಳ ಸಂಖ್ಯೆ ಬೆಳೆಯುತ್ತ ನಡೆಯಿತು. ಸಂಘ ನೂರು ಮುಖದಿಂದ ಸಾಗಹತ್ತಿತು. ಶಾಲೆ ಸುರುವಾಗಿದ್ದರಿಂದ ಖರ್ಚಿಗೆಂದು ಅನಂತ ಪಗಾರದಲ್ಲಿಯ ಕೆಲ ಹಣ ಕಳಿಸಹತ್ತಿದ. ಸ್ವಾಮೀಜಿಯವರ ಅಕ್ಷಯ ಪಾತ್ರೆಯಾದ ಜೋಳಿಗೆಯ ಸಹಾಯನಂತೂ ನಡೆದೇ ಇತ್ತು. ದಾದಾರ ಪೆನಶನ್ನು ಕೇವಲ ದವಾಖಾನೆಗೆ. ಇದಲ್ಲದೆ ಭಯ್ಯಾ ಕೂಡಿಸುತ್ತಿರುವ ನಿಧಿ ಬೇರೆ. ಭಯ್ಯಾನ ನಿಷ್ಕಾಮ ಸೇವೆ ಸರಕಾರದ ಕಣ್ಣು ತೆರೆಯಿಸಿತು. ಗ್ರ್ಯಾಂಟು ಶಾಲೆಗೆ ದೊರೆತಂತೆ ದವಾಖಾನೆಗೂ ಸಿಗಹತ್ತಿತು.

ದಿನ ದಿನಕ್ಕೆ ಸಂಘವೃಕ್ಷವು ಪುಷ್ಪಗಳನ್ನು ಅಧಿಕವಾಗಿ ಬಿಡಹತ್ತಿತು. ಸಂಘದಾಶ್ರಯದಲ್ಲಿ ನೂಲುವ, ನೇಯುವ ಕೆಲಸಗಳೂ ಕಾಣಿಸಿಕೊಂಡವು. ಮನೆತನದ ವ್ಯವಸಾಯವೇ ನೂಲುವದು, ನೇಯುವದು ಆಗಿದ್ದರಿಂದ ಶಮಾ ಅವರ ಮೇಲ್ವಿಚಾರಕಳಾದಳು.

ಓಡುವ ಗಾಡಿಗೆ ಎಡರು–ತೊಡರುಗಳು ಅನೇಕ. ದಾದಾರ ಮೇಲೆ ಹಣ ತಿಂದ ಆರೋಪವನ್ನು ಜನರು ಹೊರಿಸಿದರು. ಆದರೂ ಭಯ್ಯಾ, ದಾದಾರು ಮೌನ. ಶಮಾನ ಮೇಲೆ ಅನೀತಿಯ ಅಪರಾಧ ಹೊರಿಸಿದರು, ಊರ ಕೆಲ ಜನ. ಭಯ್ಯಾ, ಕರೀಮರು ರೇಗಿಗೆದ್ದರು. "ನಮ್ಮ ಕೆಲಸ ಅವರಿಗೆ ಉತ್ತರ ಹೇಳಲಿ, ತಾಳಿರಿ" ಎಂದರು ದಾದಾ.

ಅನಂತನು ತಾನು ನವಕರಿ ಬಿಟ್ಟು ಬರುವೆನೆಂದು ಪತ್ರ ಬರೆದ. ಸದ್ಯ ಬೇಡ, ಇನ್ನೂ ವರ್ಷೊಪ್ಪತ್ತು ನವಕರಿ ಮಾಡಿದ ನಂತರ ಬಾ ಎಂದು ದಾದಾ ಉತ್ತರ ಕಳಿಸಿದರು. ಅನಂತನ ಎಲ್ಲ ಲಕ್ಷ್ಯವೂ ಬೀದರಿನ ಮೇಲೆ.

ಶಮಾನ ಒತ್ತಾಯದಿಂದ ಮಲ್ಲನೂ ನವಕರಿಗೆ ತಿಲಾಂಜಲಿ ಕೊಟ್ಟ. ಸುರುವಾಯಿತು " ಮಲ್ಲಶಾಲೆ ". ಮಲ್ಲನಿಗೆ ಕೈಕೆಲಸದಲ್ಲಿ ನೈಪುಣ್ಯತೆ ಇದ್ದುದರಿಂದ ಖ್ಯಾತಿಗಳಿಸುವ ನೂರಾರು ಕಲ್ಲು-ಮಣ್ಣಿನ ಸಾಮಾನುಗಳನ್ನು ಮಾಡಿಟ್ಟ. ಬೀದರು ಕೈಕೆಲಸದ ಕುಶಲತೆಯಲ್ಲಿ ವಿಶ್ವಖ್ಯಾತಿ ಪಡೆದಿತ್ತು. ಕೈಕೆಲಸವೇ ಕಸಬಾಗಿದ್ದ ಊರ ಕೆಲವು ಕಾರ್ಯಕರ್ತರೂ ಬಂದು ಸೇರಿದರು. ಕೈಕೆಲಸದ ಕಾರಖಾನೆ ತಡವಿಲ್ಲದೇ ತಲೆಯೆತ್ತಿತು.

ಅವರವರ ಕೆಲಸ ಅವರಿಗೇ ಮೀಸಲು. ಎಲ್ಲವೂ ಶ್ರಮವಿಭಾಗದ ಪದ್ಧತಿಯ ಮೇಲೆ. ಆದರೆ ಭಯ್ಯಾ ಮಾತ್ರ ವಾಯುಶಕ್ತಿ.

ಬೀದರಿನ ಸಂಘವನ್ನು ನೋಡಲು ಸುತ್ತಲಿನವರೆಲ್ಲ ಬರಹತ್ತಿದರು. ಪತ್ರಿಕೆಗಳ ಪ್ರತಿನಿಧಿಗಳೂ ಬರಹತ್ತಿದರು.

ಆಫೀಸ ಕೆಲಸವನ್ನು ನೋಡಲು ಡಾ. ಫೆಡ್ರಿಕ್ಸರು ಕಳಿಸಿದ ಥಾಮಸ್ಸರು ಸರ್ವದಾ ಸಿದ್ಧರು. ನೂರಾರು ಕಡೆಗಳಲ್ಲಿ ಸಂಘದ ಶಾಖೆಗಳು ಆರಂಭವಾದ ವರದಿಗಳು ಬರಹತ್ತಿದವು.

ಒಂದು ಮಧ್ಯಾಹ್ನ ಎರಡು ಹೊಡೆದಿರಬಹುದು. ಸಂಘದ ಮುಂದೆ ಪ್ರೇಜರ ಕಾರು ಬಂದು ನಿಂತಿತು. ಅದರಿಂದಿಳಿದವರನ್ನು ಶಮಾ–ಮಲ್ಲರು ಸ್ವಾಗತ ಮಾಡಿ ಒಳಗೆ ಕರೆದೊಯ್ದರು. " ಇದರ ವ್ಯವಸ್ಥಾಪಕರಾರು ? " ಎಂದರು ಕರೆಕ್ಟರ ದಂಪತಿಗಳು. ಇಬ್ಬರೂ " ಭಯ್ಯಾ " ಎಂದರು. ಭಯ್ಯಾನನ್ನು ನೋಡಲು ದವಾಖಾನೆಗೆ ಎಲ್ಲರೂ ಹೋದರು.

ಆದರೆ ಒಬ್ಬ ರೋಗಿಯ ಕಾಲಿನ ಹುಣ್ಣು ತೊಳೆಯುತ್ತ ಕೂತಿರುವ ಭಯ್ಯಾ ಬಂದ ದಂಪತಿಗಳಲ್ಲಿ ಆಶ್ಚರ್ಯ ಹುಟ್ಟಿಸಿದ. " ಭಯ್ಯಾ ಮಾನವಾತೀತ "ನೆಂದು ಮನದಲ್ಲಿ ಅಂದರು. ಬಂದವರು ದಾದಾ ಭಯ್ಯಾರ ಸಂಗಡ ಸಂಘದ ಎಲ್ಲ ಭಾಗಗಳಲ್ಲಿ ಸುತ್ತಾಡಹತ್ತಿದರು. ಒಮ್ಮೆಲೇ ಎದುರಿನಲ್ಲಿ ಕಾಣುವ ಮಾನವಾಕೃತಿಯ ತೈಲಚಿತ್ರ ಸಾಹೇಬ ದಂಪತಿಗಳನ್ನು ಅಲ್ಲಿ ನಿಲ್ಲಿಸಿತು. " ಈ ತೈಲಚಿತ್ರ ಯಾರದು ? " ಎಂದು ಸಾಹೇಬರು ಕೇಳಲು "ಇದು ನಮ್ಮೆಲ್ಲರ ಜೀವನಾಡಿ, ಸಂಘಸಂಚಾಲಕ ಅನಂತನದು " ಎಂದು ದಾದಾ ಹೇಳಿದರು. ಅ–ನಂ–ತ ಎಂಬ ಮೂರಕ್ಷರ ಸಾಹೇಬರ ಸತಿಯಲ್ಲಿ ವಿದ್ಯುತ್ ಸಂಚಾರ

ವನ್ನುಂಟು ಮಾಡಿತು. ಒಮ್ಮೆಲೆ " When is he coming here ? " ಎಂದು ಸಾಹೇಬರ ಪತ್ನಿ ಕೇಳಿದರು. " ಥೋಡೇಹೀ ದಿನಮೆ ಆತಾ ಹೈ ಮಾ " ಎಂದು ಭಯ್ಯಾ ಉತ್ತರಿಸಿದ. ಅನಂತನ ಅಡ್ರೆಸ್ ತೆಗೆದುಕೊಂಡು ಸಾಹೇಬ ದಂಪತಿ ಗಳು ಹೊರಟರು. ಸಾಹೇಬರನ್ನು ಕಳಿಸಿ ದಾದಾ, ಭಯ್ಯಾ ಬಂದು ಕೂತರು. ಆವರೆ ಟೇಬಲ್ಲಿನ ಮೇಲೆ ಮೂರುನೂರು ರೂಪಾಯಿಯ ಚೆಕ್ಕು. ಸಂಘದ ಹೆಸ ರಿನಿಂದ ದಾದಾ ಉಪಕಾರಪೂರ್ವಕ ಪಾವತಿಯನ್ನೂ ಕಳಿಸಿದರು.

* * * *

ಒಂದು ಮುಂಜಾನೆ ಯಾವವೋ ವಿಷಯ ಚರ್ಚೆ ನಡೆದಿತ್ತು. ಕರೀಮ ಮತ್ತು ಮಲ್ಲರಲ್ಲಿ ಮನಸ್ತಾಪವಾಗಿದ್ದು ದಾದಾರಿಗೆ ಗೊತ್ತಿತ್ತು. ಕರೀಮ " ನಹೀ ಸಾಬ ಮೈ ಜಾತಾ ಹುಂ " ಎಂದ. ದಾದಾರ ಎರಡು ತಾಸು ಗಳ ಉಪದೇಶ ಕರೀಮನನ್ನು ಕ್ಷಮೆ ಕೇಳುವಂತೆ ಮಾಡಿತು. ಕರೀಮ, ಮಲ್ಲರು ಹೆಗಲಿಗೆ ಹೆಗಲು ಹಚ್ಚಿ ನಿಂತರು. ಒಮ್ಮೆಲೇ ಶಮಾ ಬಂದು, " ಬಾಬು, ಬಾಬು ಆಯಾ" ಎಂದಳು. ಎಲ್ಲರೂ ಹೊರಗೆ ಬಂದು ನೋಡಲು, ಮುಗುಳು ನಗೆ ಬೀರುವ ನೂತನ ದಂಪತಿ ಅನಂತ-ಸರೋಜರು.

ಎಲ್ಲರಿಗೂ ಸಂಘದ ಆವಾರದಲ್ಲಿಯೇ ಮನೆಗಳನ್ನು ಕೊಡಲಾಗಿದೆ. ಆದರೂ ಭಯ್ಯಾನ ಮನೆ ಬೇರೆ, ಮಲ್ಲ–ಶಮಾರದು ಪ್ರತ್ಯೇಕ, ಕರೀಮನದು ಅಟ್ಟದ ಮೇಲೆ, ತೀರ ಹೊರಗೆ ದಾದಾ ಅವರದು. ಸರೋಜ ಶಮಾಳ ಸಂಗಡ ಹೋದಳು. ಅನಂತ ದಾದಾರ ಸಂಗಡ ನಡೆದ. ಭಯ್ಯಾ, ಮಲ್ಲ, ಕರೀಮರು ಬೆನ್ನು ಹತ್ತಿದರು. ದಾದಾರ ಮನೆಯಲ್ಲಿ ಚಹಾ ಪಾನ ಮುಗಿ ಯಿತು. " ದಾದಾ, ನಾನು ನಿಮ್ಮನ್ನು ಕೇಳದೇ ರಾಜೀನಾಮೆ ಕಳಿಸಿಯೇ ಬಿಟ್ಟಿದ್ದೆ. ಆದರೆ ನನ್ನ ನವಕರಿಯ ಗುರುಗಳಾದ ಕಾದರಿಯವರು ನಾ ಮಂಜೂರ ಮಾಡಿ ಪರತ ಕಳಿಸಿದ್ದಾರೆ. ಸಂಗಡವೇ ಕಮ್ಯುನಿಸ್ಟರ ಹೆಸರಿ ನಲ್ಲಿ ನಡೆದಿರುವ ಜಾತೀಯ ದಂಗೆಗಳನ್ನು ಹತ್ತಿಕ್ಕಲು ನಲಗೊಂಡಕ್ಕೆ ವರ್ಗ ವಾದ ಆರ್ಡರೂ ಬಂದಿದೆ. ಇದಲ್ಲದೇ ಕಾದರಿಯವರೂ ಹೋಗುವದರಿಂದ ನಾನು ಬರಲಿಕ್ಕೇ ಬೇಕೆಂಬ ಖಾಸಗೀ ಪತ್ರವನ್ನೂ ಬರೆದಿದ್ದಾರೆ. ಅವರ ಮಾತನ್ನು ಮೀರುವದಾದರೂ ಹೇಗೆ ? " ಎಂದು ಅನಂತ ತನ್ನ ಕಥೆಯ

ನ್ನೆಲ್ಲ ಹೇಳಿದ. "ಹೋಗಿ ಬಂದ ನಂತರ ಅರ್ಧ ಪಗಾರದ ಮೇಲಿ ಪೆನಶನ್ ತೆಗೆದುಕೊಂಡು ಇಲ್ಲಿ ಕೆಲಸ ಮಾಡುವಿಯಂತೆ" ಎಂದು ದಾದಾ ಅಂದರು.

ಅನಂತ ಎರಡೇ ದಿನಗಳಲ್ಲಿ ಹೊಸ ಹುದ್ದೆಗೆ ಹಾಜರ ಆಗಲೇ ಬೇಕು. ಅನಂತ ಬಂದ ಸುದ್ದಿ ಊರಲ್ಲಿ ಹಬ್ಬಿರದಿದ್ದರೂ ನೂರಾರು ಜನರು ಬಂದು ಅನಂತನ ಭೆಟ್ಟಿ ತೆಗೆದುಕೊಂಡರು. ಆದರೆ ಕಲೆಕ್ಟರರ ಸವಾರಿ ಟೂರಿಂಗ ಮೇಲೆ ಇದ್ದದ್ದರಿಂದ ಬರುವದಾಗಲಿಲ್ಲ.

ಇಡಿ ರಾತ್ರಿ ಅನಂತ ಸಂಘದ ಬಗ್ಗೆ ಭಯ್ಯಾ ದಾದಾರೊಡನೆ ಚರ್ಚಿಸಿದ. ಅನಂತ "ನಾನು ಬಂದ ನಂತರ ವಿಶ್ವಶಾಂತಿ ಪರಿಷತ್ತು ಕರೆಯೋಣ" ಎಂದ. "ನೋಡುವಾ ಎಲ್ಲವೂ ಅವನಾಟ! ಇಂದು ಇದ್ದ ನಾನು ನಾಳಿ ಇರಬಹುದೆ? ಅನಂತ" ಎಂದರು ದಾದಾ. "ಕೆಂವ್ ದಾದಾ ಐಸಾ ಕೆಂವ್ ಬೋಲತೆ" ಎಂದು ನೊಂದವನಾಗಿ ಅನಂತ ನುಡಿದ. "ನಾ ಬರುವ ವರೆಗೆ ಸರು ನಿಮ್ಮಲ್ಲಿ" ಎಂದ ಅನಂತ. "ಏಹ ಬಾತ ಪೂಛನಾ ಹೈ ಕ್ಯಾ" ಎಂದರು ದಾದಾ.

ಮಲಗಲು ಭಯ್ಯಾನ ಸಂಗಡ ರಾತ್ರಿ ಎರಡು ಘಂಟೆಗೆ ಸರೋಜಳಿದ್ದ ಶಮಾನ ಮನೆಗೆ ಬಂದರು. ಅಲ್ಲಿ ಭಯ್ಯಾ ಅನಂತರ ಬಾಲ್ಯಜೀವನದ ಸಂಗತಿಗಳು ತೇಲಹತ್ತಿದವು. "ಅಲ್ಲೋ ಅನಂತಾ, ಆ ವಿಮಲಾ ಎಲ್ಲೆ?" ಎಂದ ಭಯ್ಯಾ. "ಏನೂ ಸುದ್ದಿ ಇಲ್ಲಪಾ ಆಕೀದು. ಆಕಿ ಒಬ್ಬಾಕಿ ನಮ್ಮ ಸಂಘದ ಮೆಂಬರ ಆಗಿದ್ದರ ಎಷ್ಟು ಛಲೊ ಆಗತಿತ್ತಃ ನೋಡು" ಎಂದ ಅನಂತ. ಆಮೇಲೆ ಸರೋಜಳ ಸಂಗಡ ಆಪ್ತಾಲೋಚನೆಯನ್ನೂ ಮಾಡಿದ. ಸರೋಜ "ಬ್ಯಾಡ್ರಿ, ನನಗ ಈಗ ಮಲಕೊಂಡಾಗ ಕೆಟ್ಟ ಕನಸು ಬಿದ್ದಿತ್ರಿ, ನೀವು ಈಗ ರಾಜೀನಾಮೆ ಕೊಟ್ಟ ಬಿಡ್ರಿ" ಎಂದಳು. "ಹುಚ್ಚಿ! ಕನಸೆಲ್ಲ ಖರೇ ಆದ್ರ ತೀರಿತ್ಯಲ್ಲ, ಲಗೂ ಬರತೀನಿ" ಎಂದ ಅನಂತ. ಹರಟೆಯಲ್ಲಿ ಬೆಳಗಾಯಿತು.

ಮುಂಜಾವಿನಿಂದ ಅನಂತನನ್ನು ಬೀಳ್ಕೊಡಲು ನೂರಾರು ಜನರು ಸೇರಹತ್ತಿದರು. ಅನಂತನಿಗೂ ಏಕೋ ವ್ಯಥೆಯೆನಿಸಹತ್ತಿತು. "ಹೋಗು

ವದನ್ನು ಬಿಟ್ಟರೆ ಹೇಗೆ" ಎಂದು ತನ್ನನ್ನೇ ತಾನು ಕೇಳಿಕೊಂಡ. ವಿಧಿ ಹೋಗೆಂದಿತು. "ದಾದಾ ನಿಮ್ಮ ಕೆಲಸ ದೇವ ಕೆಲಸ" ಎಂದ. ಶಮಾ, ಸರೋಜರನ್ನು ಮುಂದೆ ಕರೆದು "ನಾ ಬಂದ ಮ್ಯಾಲೆ ಕೋಲಲ್ಳಿಗೆ ಹೋಗಿ ಬರೋಣ" ಎಂದ. ಭಯ್ಯಾನಿಗೆ ಕಿವಿಮಾತು ಹೇಳಿದ. ಎಲ್ಲರಿಗೂ ಮನಃಪೂರ್ವಕ ವಂದನೆ ನೀಡಿದ. "ಲಗೂ ಬರತೀನಿ" ಎಂದ. ಗಾಡಿ ಯಾವದಕ್ಕೂ 'ಹೂಂ'ಗೊಡದೇ ಓಡಿತು. ದಾದಾರು ಕಣ್ಣು ಒರೆಸಿ ಕೊಂಡರು. ಎಲ್ಲರೂ ತಿರುಗಿದರು. ಆದರೆ ಅನಂತ ಮಾತ್ರ ಮುಂದೋಡಿದ.

ಸರೋಜಳಿಗೆ ಅನಂತನ ಅಗಲುವಿಕೆಯಿಂದ ಸ್ವಭಾವಜನ್ಯ ವೇದನೆ ಯಾದರೂ ತಾಯಿಯ ಮನೆಯ ಸಡಗರವೆಲ್ಲ ಸಂಘದಲ್ಲಿ ಇದ್ದುದರಿಂದ ವೇದನೆ ಕೊಂಚ ಕಡಿಮೆ ಎನಿಸಹತ್ತಿತು. ಶಮಾನ ಸಂಗಡ ದಿನಾಲು ಸಂಘದ ಚಟುವಟಿಕೆಗಳಲ್ಲಿ ಭಾಗ ವಹಿಸಹತ್ತಿದಳು. ಒಂದು ಕ್ಲಾಸಿನ ಶಿಕ್ಷಕಿಯೂ ಆದಳು. ದಿನಗಳೆದಂತೆ ಸರೋಜಳ ಜೀವನ ಸಂಘಮಯ ವಾಯಿತು.

ಅನಂತ ಹೋಗಿ ಎರಡು ತಿಂಗಳ ಮೇಲಾಗಿದ್ದರೂ ಓಲೆ ಇಲ್ಲದ್ದರಿಂದ ಸರೋಜಳ ಸಂಗಡ ಸಂಘಕ್ಕೆಲ್ಲ ವ್ಯಾಕುಲವಾಗಿತ್ತು. ಭಯ್ಯಾನನ್ನು ಅಲ್ಲಿಗೆ ಕಳಿಸಬೇಕು ಎಂದು ವಿಚಾರ ಮಾಡುತ್ತ ದಾದಾ ಮುಂತಾದವರು ಆಫೀಸಿ ನಲ್ಲಿ ಕೂತಿದ್ದರು. ಒಮ್ಮೆಲೇ ಕಾರಿನ ಸಪ್ಪಳವಾಯಿತು. "ಆಯಿಯೇ ಮಾ" ಎಂದರು ದಾದಾ. ಒಳಗೇ ಬಂದರು ಮೇಂಸಾಬರು. "ಎಕ್ಸಕ್ಯೂಜ ಮೀ, ನೀವು ಕೊಟ್ಟ ಆಡ್ರೆಸ್ ಕಳದ ಹೋತು ನಾವು ಟೂರ ಮ್ಯಾಲೆ ಇದ್ದಾಗ. ಅವರು ಎಂದ ಬರತಾರ? ಅವರ ಆಡ್ರೆಸ್ ಪ್ಲೀಜ್ ಕೊಡತೀರಾ" ಎಂದರು. "ನಾವೂ ಅದನ್ನs ವಿಚಾರ ನಡಿಸಿವಿ ಮಾ. ಅವರು ಈಗ ನಲಗೊಂಡಕ್ಕ ಹೋಗ್ಯಾರ. ನಾವು ನಾಲ್ಕ ಪತ್ರಾ ಹಾಕಿದರೂ ಉತ್ತರಿಲ್ಲ. ಅದಕ್ಕ ನಾನs ಹೋಗಿ ಬರತೀನಿ" ಎಂದ ಭಯ್ಯಾ. ಅಷ್ಟರಲ್ಲಿ ಪೋಸ್ಟಮನ್ ಬಂದು ಕಾಗದ ಗಳನ್ನು ಕೊಟ್ಟು ಹೋದ. ದಾದಾರ ಕೈಗೆ ಸಿಕ್ಕ ಮೊದಲನೇ ಕಾಗದವೇ ಅನಂತನದು.

"ನಾನು ಆರಾಂ ಇದ್ದೇನೆ, ಕೆಲಸ ಮುಗಿದ ಕೂಡಲೇ ಕಾದರೀಯವರ ಸಂಗಡ ಬರುತ್ತೇನೆ" ಎಂದು ಬರೆದ ಅನಂತನ ಪತ್ರದ ಸಾರವನ್ನು ದಾದಾ

ಎಲ್ಲರಿಗೂ ಹೇಳಿದರು. ಸರೋಜಳ ಸಂಗಡ ಎಲ್ಲರಿಗೂ ಅದು ಆನಂದ. ಭಯ್ಯಾನಿಂದ ಅಡ್ರೆಸ್ ತೆಗೆದುಕೊಂಡು ಅವನ ಕೈಯ್ಯಲ್ಲಿ ಪಾಕೀಟೊಂದನ್ನಿಟ್ಟು ಕಲೆಕ್ಟರ ಸಾಹೇಬರ ಹೆಂಡತಿ ಹೊರಟು ಹೋದರು. ಭಯ್ಯಾ ಪಾಕೀಟ ಒಡೆದ. ನೂರು ರೂಪಾಯಿಯ ಚೆಕ್ಕು.

ಪುನಃ ದಿನಗಳು ನಿಯಮದಂತೆ ನಡೆಯಹತ್ತಿದವು. ದಾದಾಗೆ ಕೆಲಸ ಹೆಚ್ಚಾಗಿದ್ದರಿಂದ ಡಾ. ಫೆಡ್ರಿಕ್ಸರಿಗೂ, ಅನಂತನಿಗೂ ಬೇಗನೇ ಬರಲು ಓಲೆ ಬರೆಯುತ್ತ ಕೂತಿದ್ದರು. ಶಮಾ, ಸರೋಜರು 'ದಾದಾ' ಎನ್ನುತ್ತ ಒಳಗೆ ಬಂದರು. 'ಕೆಂವು ಬೇಟಿ' ಎಂದು ಪಿತೃವಾತ್ಸಲ್ಯದಿಂದ ಸರೋಜಳ ಬೆನ್ನ ಮೇಲೆ ಕೈಯಾಡಿಸಿದರು. "ದಾದಾ, ಎರಡುಮೂರು ದಿನದಿಂದ ಬಹಳ ಹೊಟ್ಟೆ ನೋಯಲಿಕ್ಕೆ ಹತ್ತೇದ" ಎಂದಳು ಸರೋಜ. ಸಾವಿರಾರು ಸ್ತ್ರೀ–ಮಕ್ಕಳನ್ನು ಸಾಕಿ ಸಲುಹಿ, ಬಾಳಿ ಬೆಳೆಯುವಂತೆ ಮಾಡಿದ ದಾದಾರಿಗೆ ಸರೋಜಳ ಶೂಲಿಯ ಅರ್ಥವಾಯಿತು. "ಬೇಟಿ, ಇವತ್ತಿನಿಂದ ನೀ ಮನ್ಯಾಗ ಇದ್ದು ವಿಶ್ರಾಂತಿ ಪಡೆ" ಎಂದರು. ಸರೋಜಳ ಶುಭೋದಯ ಜೀವನದ ಅರುಣ ಮೂಡಹತ್ತಿದ್ದಾನೆಂಬುದು ಶಮಾಳಿಗೂ ತಿಳಿದಾಗ ಅವಳ ಆನಂದಕ್ಕೆ ಅಂತಪಾರ ಇಲ್ಲದಾಯಿತು.

ಶಮಾ, ಸರೋಜರು ಮನೆಗೆ ಬಂದರು. ಶಮಾ ಮನೆತುಂಬ ಕುಣಿದಾಡಿದಳು. ಕೋಲಳ್ಳಿಯ ಭಟ್ಟರಿಗೆ ಬರಲು ಓಲೆ ಕಳಿಸಿದಳು. ಸಂತೋಷದ ಭರದಲ್ಲಿ ದಾದಾ ಕೊಟ್ಟಿದ್ದ ಔಷಧ ಸರೂಗೆ ಕೊಡುವದನ್ನೇ ಮರೆತಳು.

ಭಟ್ಟರು ಕೋಲಳ್ಳಿಯಿಂದ ಬರುವಾಗ ಹಸಿರು ಬಳೆ ಹಸಿರು ಸೀರೆಯನ್ನು ತಂದರು. "ಸೀರೆ–ಕುಪ್ಪಸ"ಗಳ ಸಮಾರಂಭವಾಯಿತು. ಭಟ್ಟರ ಆನಂದ ಎಲ್ಲೆ ಮೀರಿತು. ಸರೋಜ ಮಗುನ್ನ ಕರಕೊಂಡ ಬರತೀ ಏನವ್ವ ನಮ್ಮೂರಿಗೆ" ಅಂದರು ಭಟ್ಟರು. ಸರೋಜ ನಾಚಿದಳು. ಶಮಾ ನಕ್ಕಳು. "ಸರೋಜ, ನಮ್ಮ ರಾಯರೂ ಕಮಲಾಬಾಯರೂ ನೋಡಿದ್ರ ಬಹಳ ಛೊಲೋ ಆಗತಿತ್ತವಾ" ಎಂದು ಮಿಡುಕಿದರು ಭಟ್ಟರು.

ದಿನದಿನಕ್ಕೆ ಸರೋಜ ಇಳಿಯಹತ್ತಿದಳು. ಅಶಕ್ತತೆ ಹೆಚ್ಚಿತು. ಮಲಗಿ

ಏಳಲೂ ಕೂಡ ಕಷ್ಟವಾಯಿತು. ಆದರೂ ತುಂಬಿದ ಸರೋಜಳ ದೇಹಕ್ಕೆ ಅದು ಒಂದು ಸಿಂಗಾರವೇ ಆಯಿತು.

* * * *

ಒಂದು ಸಂಜೆ ಮಲ್ಲನು ತಂದ ಮಲ್ಲಿಗೆ ಮಾಲೆಯನ್ನು ಸರೋಜ ಅನಂತನ ಫೋಟೋಕ್ಕೆ ಹಾಕಲು ಹೋದಳು. ಆದರೆ ಮೊಳೆ ಸಡಿಲಾಗಿದ್ದ ರಿಂದ ಫೋಟೊ ಕೆಳಗೆ ಬಿತ್ತು. ಅದು ಸರೋಜಳ ಜೀವಕ್ಕೆ ಸಿಡಿಲು ತಾಕಿ ದಂತಾಯಿತು. ಅತ್ತಳು. ಕುಂಕುಮವನ್ನು ಘಟ್ಟಿಯಾಗಿ ಹಿಡಕೊಂಡಳು ಪುನಃ ಆಯಾಸದಿಂದಲೇ ಎದ್ದು ಎಲ್ಲವನ್ನೂ ವ್ಯವಸ್ಥಿತವಾಗಿಟ್ಟಳು. ಮನದಲ್ಲಿ ದೇವ ನನ್ನು ಸ್ಮರಿಸಿದಳು. ಹೊಟ್ಟೆಶೂಲಿ ಅಧಿಕವಾಯಿತು. ನರಳುತ್ತ ನೆಲಹಿಡಿದಳು. ಶಮಾ ಹೋಗಿ ಡಾಕ್ಟರರನ್ನು ಕರೆತಂದಳು.

ಮದ್ರಾಸಿನಿಂದ ಬಂದ ಡಾ. ಫೆಡ್ರಿಕ್ಸರೂ ದಾದಾರ ಸಂಗಡ ಬಂದರು. ಶಮಾ ತೀರ ಗಾಬರಿಯಾದಳು. ಇಂಜೆಕ್ಶನ್ ಮೇಲೆ ಇಂಜೆಕ್ಶನ್ ದಾದಾ ಕೊಟ್ಟರು. ಫೆಡ್ರಿಕ್ಸರ ಹೆಂಡತಿ ಜ್ಯೋತಿಬಾಯಿಯೇ ನರ್ಸ ಕೆಲಸ ನಡೆಸಿ ದರು. ಖೋಲಿಯ ಬಾಗಿಲಗಳು ಮುಚ್ಚಿದವು. ಶಮಾ ಗಾಬರಿಯಾಗಿ ಭಯ್ಯಾ, ಕರೀಮರನ್ನು ಕರೆದಳು. " ಕರೀಮು, ನಾವು ಹಾಕಿದ ಪತ್ರಗಳು ಒಂದೂ ಅಲ್ಲಿ ಮುಟ್ಟುವವಿಲ್ಲದಂತೆ ನೋಡೊ. ಈಗ ಪೋಸ್ಟ ಮಾಸ್ತರು ಅಂದ್ರು " ಎಂದ ಭಯ್ಯಾ. " ಇರಲಿ ಭಯ್ಯಾ, ಸರೋಜ ಸುಸೂತ್ರ ಹಡದ್ಲೆ ಅಂದ್ರ ನಾವಃ ಅಲ್ಲಿಗೆ ಹೋಗಿ ಬರೋಣ. ಹಾಂಗಃ ಆ ಕಲೆಕ್ಟರ ಹೆಂಡತಿನೂ ಬರತೀನಿ ಅಂದಾರ " ಎಂದ ಕರೀಮು. ಎಲ್ಲರ ಮುಖಗಳೂ ಸಪ್ಪಗಾಗಿದ್ದವು. ಒಮ್ಮೆಲೇ ಸಣ್ಣ ಮುಖ ಮಾಡಿಕೊಂಡು ದಾದಾ ಹೊರಗೆ ಬಂದರು. ಆತುರತೆ ಯಿಂದ ಭಯ್ಯಾ " ಕೈಸಾ ಹೈ ? " ಎಂದು ಕೇಳಿದ. ' ಬಹುತ ಸೀರಿಯಸ್ ಹೈ " ಎಂದು ಅನ್ನುತ್ತ ದಾದಾ ದಿಙ್ಮೂಢರಾಗಿಯೇ ನಿಂತುಬಿಟ್ಟರು. ಶಮಾ, ಮಲ್ಲರ ಕಾಲುಗಳೇ ಏಳದಾದವು. ಒಂದು ಕ್ಷಣ ವಿಚಿತ್ರ ಮೌನ ವ್ಯಾಪಿಸಿತು ಅವರನ್ನೆಲ್ಲ.

ಒಮ್ಮೆಲೇ ನರ್ಸ ನಗುತ್ತ ಬಾಗಿಲ ತೆರೆದಳು. " How is it " ಎಂದರು ದಾದಾ. " All O. K. quite right " ಎಂದಳು ನರ್ಸ. ಮರುಕ್ಷಣದ ಲ್ಲಿಯೇ ಒಳಗಿನಿಂದ ಚೀರುವ ಮಗುವಿನ ಧ್ವನಿಯು ಗಡಿಯಾರ ಬಡಕೊಳ್ಳುವ

ಹತ್ತು ಗಂಟೆಯ ನಾದದೊಡನೆ ಕೂಡಿತು. ಎಲ್ಲರ ಮುಖದ ಮೇಲೆ ಸಂತಸದ ನಗೆ ತೇಲಹತ್ತಿತು. ಅಂದು ಸಂಘಕ್ಕೆ ಒಂದು ಹಬ್ಬ. ಶಮಾಳಿಗೆ ಅದು ಯುಗಾದಿ. ಭಯ್ಯಾ, ಭಟ್ಟರ ಸಡಗರ ಹೇಳತೀರದು. ಉಬ್ಬಿನಲ್ಲಿದ್ದ ಮಲ್ಲ ಬಂದವನೇ "ಅವ್ವಾ ಹ್ಯಾಂಗ ಇದ್ದೀಯವ್ವ" ಎಂದ. ಮಗ್ಗುಲದಲ್ಲಿದ್ದ ಭಯ್ಯಾ "ಏ ಸ್ವಲ್ಪ ತಡಿ, ಈಗ ಮಾತಾಡಬಾರದು" ಅಂದ. ಡಾ. ಫೆಡ್ರಿಕ್ಸರು ಔಷಧೋಪಚಾರ ಯಥಾವತ್ ನಡೆದಸಿರು. "ಅನಂತನ ಕೆಲಸ ಮುಗಿದಿರ ಬಹುದೇ ?" ಎಂದನು ಭಯ್ಯಾ.

ಮುಂಜಾನೆ ಭಯ್ಯಾ ಮತ್ತು ದಾದಾ ಮನೆ ಮುಟ್ಟುವ ಮೊದಲೇ ಉತ್ತರ ಎಂಬಂತೆ ಆದೇ ನಲಗೊಂಡದಿಂದತಂತಿ ಬಂತು. ದಾದಾರ ಕೈ ನಡುಗು ತ್ತಿತ್ತು.!ಭಯ್ಯಾ ಪಾಕೀಟು ಒಡೆದ. "ನಿನ್ನೆ ರಾತ್ರಿ ಆರು ಗಂಟೆಗೆ ಜಾತೀಯ ದಂಗೆ ಹತ್ತಿಕ್ಕುವಾಗ ಅನಂತರಾಯರಿಗೆ ಗುಂಡು ಬಡಿಯಿತೆಂದೂ, ರಾತ್ರಿ ಹತ್ತು ಗಂಟೆಗೆ ಮೃತರಾದರೆಂದೂ" ಬರೆದಿತ್ತು. ತಂತಿ ದಾದಾ ಮತ್ತು ಭಯ್ಯಾರ ಜೀವ ತಂತಿಗಳನ್ನೇ ಕಡಿಯಿತು. ಭಯ್ಯಾನ ಬಾಯಿಂದ ಮಾತು ಹೊರಡ ಲಿಲ್ಲ. ದಾದಾ ಸಮಾಧಿಸ್ಥನಂತೆ ಕೂತರು. ಫೆಡ್ರಿಕ್ಸರು ಮೌನ ಪ್ರಾರ್ಥನೆ ನಡೆಸಿದರು.

ಸರೋಜಳಿದ್ದ ಮಲ್ಲನ ಮನೆಗೆ ಬಂದು ಭಯ್ಯಾ ಮಲ್ಲನನ್ನು ತೆಕ್ಕೆಬಿದ್ದು ಅಳಹತ್ತಿದ. ಮಲ್ಲನಿಗೆ ಆಕಾಶವೇ ಕಳಚಿ ಬಿದ್ದಂತಾಯಿತು. ಕಲ್ಲಿಗಿಂತಲೂ ಕಠಿಣವಾದ ಭಯ್ಯಾನ ಹೃದಯ ಕರಗಿ ನೀರುನೀರಾಗಿ ಮನೆತುಂಬ ಹರಿಯಿತು. ಹಸಿ ಮೈಯ ಸರೋಜ ಈ ಜಗವನ್ನೇ ಮರೆತಳು. ಅನಂತನ ಮರಣದ ಸಿಡಿಲಿನಂಥ ಸುದ್ದಿ ಸಂಘವನ್ನೆಲ್ಲ ಜರ್ಜರಿತವನ್ನಾಗಿ ಮಾಡಿತು. ಸಂಘವನ್ನು ಬೆಳಗುತ್ತಿದ್ದ ದಿವ್ಯ ಭಾನು ಅಸ್ತಂಗತನಾದ. ಬಗಲಗೂಸಿನಂತೆ ಸರೋಜ ಮನೆತುಂಬ ಉರುಳಾಡಹತ್ತಿದಳು. ಮುಗ್ಧ ಶಮಾ ಕಣ್ಣು ತಿಕ್ಕುತ್ತ ಹಾಗೇ ನಿಂತಳು. ಆದರೆ ಭಟ್ಟರು ಮಾತ್ರ "ಸರೋಜಮ್ಮ, ನಿನ್ನ ಸುಕುಮಾರನ ರೂಪದಲ್ಲಿ ಅನಂತ ಬಂದಿದ್ದಾನೆ" ಎಂದು ಸಮಾಧಾನ ಪಡಿಸಹತ್ತಿದರು. ಬಿರು ಗಾಳಿಯಲ್ಲಿ ನಿಂತ ದೀಪಕ್ಕೆ ಕೈಮರೆ ಎಷ್ಟಾಗಬಹುದು?

ಅನಂತನ ಮರಣದ ವಾರ್ತೆ ಕಲೆಕ್ಟರ ಮತ್ತು ಅವರ ಪತ್ನಿಗೆ ಮರ್ಮ

ಘಾತವನ್ನುಂಟು ಮಾಡಿತು. ಆ ಕ್ಷಣಕ್ಕೆ ಸರೋಜಳಿದ್ದಲ್ಲಿಗೆ ಇಬ್ಬರೂ ಧಾವಿಸಿ ಬಂದರು ಅವಳನ್ನು ಸಂತೈಸುವದು ಅವರಿಗೆ ಜೀವಕ್ಕಿಟ್ಟುಕೊಂಡಿತು.

ಅನಂತನ ಚಿತ್ರದ ಅಡಿಯಲ್ಲಿ ಸಂಘವೆಲ್ಲ ಸೇರಿತು, ಮೌನ ಪ್ರಾರ್ಥನೆ ನಡೆಸಲು. ಕಾಳದಿನದ ಕುರುಹು ಎಲ್ಲೆಡೆಯಲ್ಲಿಯೂ ಕಾಣುತ್ತಿತ್ತು. ಪ್ರಾರ್ಥನೆ ಮೂಕವಾಗಿಯೇ ನಡೆಯಿತು.

ಎಲ್ಲರೂ ಹೋದರು. ಆದರೆ ಅನಂತನ ಫೋಟೋವನ್ನೇ ದಿಟ್ಟಿಸಿ ನೋಡುತ್ತ ಕಲೆಕ್ಟರರ ಪತ್ನಿ ಮಾತ್ರ ನಿಂತಳು. ಭಯ್ಯಾ ಬಂದು, " ತಾಯಿ, ಇನ್ನೆಲ್ಲಿ ಅನಂತ ? ತಮ್ಮ ಹೆಸರೇನು ? " ಎಂದ. ಅನಂತನನ್ನು ನೋಡಲು ವಿಶ್ವಪ್ರಯತ್ನ ಮಾಡಿದಾಗಲೂ ಅವನನ್ನು ಕಾಣದ ಪಾಪಿ " ವಿಮಲೆ ನಾನು " ಎಂದಳು. ಭಯ್ಯಾ " ನಾ ರಹೀಮ " ಎಂದ.

ಇವರಿಬ್ಬರ ನಡುವಿನ ಅನಂತನೊಬ್ಬ ಮಾತ್ರ ಅನಂತದಲ್ಲಿ ಸೇರಿ ಅಮರನಾದ. ಜಾತೀಯ ಐಕ್ಯತೆಗಾಗಿ ಜೀವದಾನವನ್ನೇ ಮಾಡಿದ. ಅನಂತನ ಕೆಲಸ ಮುಗಿಯದೆ ಹಾಗೆ ಉಳಿಯಿತು. ಅದು ಮುಗಿಯದ ಕೆಲಸವೆ ?



